# ಕೊಡಗು ಸಂಗಾತಿ

ಸ್ಟ್ 16 ರಿಂದ 31, 1999 | ಪಾಕ್ಷಿಕ ಪತ್ರಿಕೆ | (ಆಟಿ ತಿಂಗ 31 – ಸೋಣ 14ರತನಕ)

ನಂ. ೩೫, ಸವಿತಾ ನಿಲಯ, ೧ನೇ ಕ್ರಾಸ್, ೪ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - ೫೭೦ ೦೧೨

ಾದಕಿ : ಪಟ್ಟಡ ಶೀಲಾಮಣಿ | ಕನ್ನಡ ಮತ್ತು ಅರೆಭಾಷೆಯ ಏಕೈಕ ಪಾಕ್ಷಿಕ ಪತ್ರಿಕೆ

R. N. N. 240 | ಸಂಪುಟ : 3 | ಸಂಚಿಕೆ : 16 | ಪುಟಗಳು : 24 | ಬೆಲೆ ರೂ. : 5-00




ಭಗಂಡೇಶ್ವರ ದೇವಾಲಯದ ಮೂರು ಮೆಟ್ಟಿಲುಗಳ ಮೇಲೇರಿದ ಮಳೆರಾಯ



ಕಾವೇರಿ – ಕನ್ನಿಕಾ ನದಿಗಳ ಮಿಲನ ತ್ರಿವೇಣಿ ಸಂಗಮ – ಚಿತ್ರ : ಸೂರ್ತಲೆ ಜಯಂತ್‌ಕುಮಾರ್

## ಎಡೆಬಿಡದೆ ಸುರಿಯುವ ಜಡಿ ಮಳೆಯಿಂದಾಗಿ ನೀರಿನಿಂದ ಮುಳುಗಿರುವ ಸ್ನಾನಘಟ್ಟ ಮತ್ತು ಆಲದ ಕಟ್ಟೆ – ಭಾಗಮಂಡಲ, ಕೊಡಗುಜಿಲ್ಲೆ.

# ಕೊಡಗು ಸಂಗಾತಿ ಚಿಹ್ನೆಯ ಬೆಲೆ ಕೇವಲ ರೂ. 5/- ರ ಮುಖಬೆಲೆಯಲ್ಲಿ ಲಭ್ಯ



**ಲಭ್ಯವಿರುವ ಸ್ಥಳ :**

**ಕೊಡಗು ಸಂಗಾತಿ ಕಛೇರಿ ನಂ. 35,** ಸವಿತಾ ನಿಲಯ, 1ನೇ ಕ್ರಾಸ್, 4ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - 12 ದೂರವಾಣಿ : 0821/516771

**ಕೊಡಗು ಸಂಗಾತಿ ಶಾಖೆ**

**C/o ಬೈತಡ್ಕ ಜಾನಕಿ ಬೆಳ್ಯಪ್ಪ**
ನಂ. 21-16 ಎಲ್. ಐ. ಸಿ. ಕಛೇರಿ ಎದುರು, ರೇಸ್ ಕೋರ್ಸ್ ರಸ್ತೆ, ಮಡಿಕೇರಿ - 570 201, ದೂರವಾಣಿ : 08272/28047

**ಪಾಂಡ್ಯನ್ ಕ್ಯಾಸೆಟ್ಸ್ ಅಂಗಡಿ,** ಖಾಸಗಿ ಬಸ್ ನಿಲ್ದಾಣ, ಮಡಿಕೇರಿ - 570 201, ದೂರವಾಣಿ : 08272/29620

ಜನಾಂಗದ ಐಕ್ಯತೆಗಾಗಿ 9-4-1997ರಲ್ಲಿ "ಕೊಡಗು ಸಂಗಾತಿ" ಪತ್ರಿಕೆ ಹುಟ್ಟಿದಾಗ ತನ್ನನ್ನು ತಾನೇ ಗುರುತಿಸಿಕೊಳ್ಳಲು ಒಂದು ಚಿಹ್ನೆಯ ಅನಿವಾರ್ಯವಾಗಿತ್ತು. ಪತ್ರಿಕೆಯ ಪ್ರಥಮ ಸಂಚಿಕೆಯಲ್ಲಿ ಕುಲದೇವರು, ಒಡಿಕತ್ತಿ ಹಾಗೂ ಕೋವಿಯ ವಿವರಣೆ ನೀಡಿದ್ದೇವೆ. ಚಿಹ್ನೆಯ ಮಾದರಿಯು ಒಂದೇ ಅಳತೆಯಲ್ಲಿದ್ದು ಇದನ್ನು ಬದಲಾಯಿಸಲು ಆಗುವುದಿಲ್ಲ. ಒಡಿಕತ್ತಿಯು ಎಡಗಡೆಯಲ್ಲಿದ್ದು ಅಳತೆಯು ಚಿತ್ರದಲ್ಲಿ ನಮೂದಿಸಿದಂತೆ ಇರುವುದಲ್ಲದೆ ವೀರರ ಸಂಕೇತವಾಗಿದೆ. ಬಲಗಡೆ ಜೋಡುನಳಿಕೆಯ ತೋಟೆಯ ಕೋವಿ ಅಡ್ಡಲಾಗಿದೆಯಲ್ಲದೆ ನಿಷ್ಠಾವಂತರ ತ್ಯಾಗದ ಶಾಂತಿಯ ಭಾವನೆಯಾಗಿದೆ. ಕುಲದೇವತಾ ಶ್ರೀ ವೆಂಕಟರಮಣನ ಚಿತ್ರವು ಇವೆರಡರ ಮಧ್ಯಭಾಗದ ಮೇಲ್ಭಾಗದಲ್ಲಿದ್ದು ಪಶ್ಚಿಮ ಘಟ್ಟದ ಅರೆಭಾಷಿಕ ಗೌಡರ ಪ್ರತೀಕವಾಗಿದೆ. ಇದು ನಮ್ಮ ಪತ್ರಿಕೆಯ ಮತ್ತು ಕುಲಬಾಂಧವರ ಸಂಘಟನೆಗೆ ಧೈರ್ಯ ಮತ್ತು ತ್ಯಾಗದ ಸ್ಫೂರ್ತಿಯಾಗಿದೆ. ಈ ಮೇಲಿನ ಚಿಹ್ನೆಯು ಯಾವುದೇ ಕಾರಣಕ್ಕೂ ಕೆಲವರಿಂದ ದುರ್ಬಳಕೆ ಆಗುವಂತಿಲ್ಲ. ಕೆಲವು ಮೂಲ ಉದ್ದೇಶಗಳೊಂದಿಗೆ ಜನರ ಬಳಕೆಗಾಗಿ ಈ ಚಿಹ್ನೆಯು ರೂ. 5/- ರ ಮುಖಬೆಲೆಯಲ್ಲಿ ಈ ಮೇಲ್ಕಾಣಿಸಿದ ವಿಳಾಸದಲ್ಲಿ ಮಾತ್ರ ಲಭ್ಯವಾಗಲಿದೆ.

ಜನರ ಕೋರಿಕೆಯ ಮೇರೆಗೆ ನೂತನವಾಗಿ ಬಿಳಿಬಣ್ಣದ ಪರದೆಯಲ್ಲಿ ಚಿನ್ನದ ಬಣ್ಣದಿಂದ ಕೂಡಿದ 7½ ಸೆಂಟಿಮೀಟರ್‌ನ ಸುತ್ತಳತೆಯ ಚಿಹ್ನೆಯನ್ನು ಪುನರ್ ಮುದ್ರಣದೊಂದಿಗೆ ಹೊರತರಲಾಗಿದೆ. ಈ ಚಿಹ್ನೆಯು ಮೇಲ್ಕಾಣಿಸಿದ ವಿಳಾಸದಲ್ಲಿ ಹೊರತುಪಡಿಸಿ ಬೇರೆ ಎಲ್ಲೂ ಸಿಕ್ಕುವುದಿಲ್ಲ. ಒಂದು ವೇಳೆ ಯಾರೇ ಆದರು ಇದರ ದುರ್ಲಾಭ ಪಡಿಸಿ ವ್ಯಾಪಾರಿ ಮನೋಭಾವನೆಯಿಂದ ಮಾರುತ್ತಿರುವುದು ನಮ್ಮ ಗಮನಕ್ಕೆ ಬಂದರೆ ಇದು ಅಕ್ಷಮ್ಯ ಅಪರಾಧವಾಗುದಲ್ಲದೆ ಗಂಭೀರವಾಗಿ ಪರಿಗಣಿಸಲಾಗುವುದು. ಇದರ ಹಕ್ಕು ಪೂರ್ತಿ ಕೊಡಗು ಸಂಗಾತಿ ಸಂಸ್ಥೆಗಲ್ಲದೆ ಬೇರೆ ಯಾರ ಸ್ವತ್ತು ಆಗಿರುವುದಿಲ್ಲ. ಅರೆಭಾಷಿಕರು, ಜನಾಂಗದ ಸರ್ವರು, ಸಂಗಾತಿ ಓದುಗರು ಈ ನಿಟ್ಟಿನಲ್ಲಿ ಮನಪೂರ್ವಕವಾಗಿ ಚಿಹ್ನೆಯನ್ನು ಕೊಂಡು ಪತ್ರಿಕೆಯ ಬೆಳವಣಿಗೆಗೆ ಸಹಕರಿಸುವಂತೆ ತಮ್ಮಲ್ಲಿ ನನ್ನ ವಿನಮ್ರ ಮನವಿಯಾಗಿದೆ.

**ಸಂಪಾದಕಿ : ಪಟ್ಟಡ ಶೀಲಾಮಣಿ**

---

## ವಿದ್ಯಾರ್ಥಿ ಪ್ರತಿಭೆ



**ಯಂ. ಆರ್. ಕೌಶಿಕ್**

1998-1999ನೇ ಸಾಲಿನ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಗರಿಷ್ಠ ಅಂಕ 625ಕ್ಕೆ 574ರಷ್ಟು ಅಂಕ ಗಳಿಸಿ 91.84%ನಲ್ಲಿ ಪಾಸಾಗಿದ್ದಾನೆ. ಈತನ ತಂದೆ ಶ್ರೀರಂಗಪಟ್ಟಣ ತಾಲ್ಲೋಕಿನ ಮಹದೇವಪುರ ಗ್ರಾಮದವರು. ಹಾಲಿ ಪೊನ್ನಂಪೇಟೆಯಲ್ಲಿ ಉದ್ಯೋಗದಲ್ಲಿದ್ದು ತಾಯಿ ಭಾಗೀರತಿ ನಾಪೋಕ್ಲು ನಾಡಿನ ಬಲ್ಲಮಾವಟಿ ಗ್ರಾಮದ ಎಡಿಕೇರಿ ಉತ್ತಯ್ಯನವರ ಮಗಳಾಗಿರುವರು.

# ಕೊಡಗು ಸಂಗಾತಿ

ಸಂಪಾದಕಿ, ಪ್ರಕಾಶಕಿ :

**ಪಟ್ಟಡ ಪಿ. ಶೀಲಾಮಣಿ**

ಗೌರವ ಸಂಪಾದಕ :

**ಪಟ್ಟಡ ಎಂ. ಪ್ರಭಾಕರ**

ಚಂದಾ ಕಳುಹಿಸುವ ಮತ್ತು
ಜಾಹೀರಾತು ಪ್ರಸಾರ ಕಛೇರಿ :

**ಕೊಡಗು ಸಂಗಾತಿ**

ನಂ. 35, "ಸವಿತಾ ನಿಲಯ"
1ನೇ ಕ್ರಾಸ್, 4ನೇ ಬ್ಲಾಕ್,
ಜಯಲಕ್ಷ್ಮಿಪುರಂ, ಮೈಸೂರು - 570 012.
**ಫೋನ್ : 0821/516771**

**ಮಡಿಕೇರಿಯಲ್ಲಿ ಸಂಗಾತಿ ಕಛೇರಿ**

**ಬೈತಡ್ಕ ಜಾನಕಿ ಬೆಳ್ಯಪ್ಪ**
ನಂ. 21-16 ಎಲ್. ಐ. ಸಿ. ಹತ್ತಿರ
ರೇಸ್ ಕೋರ್ಸ್ ರಸ್ತೆ, ಮಡಿಕೇರಿ
ದೂರವಾಣಿ : 08272/28047

**ಸಂಪರ್ಕಿಸುವ ವಿಳಾಸ**

**ಮಣಿ ನಂಗಾರ್**
ಹೊಳ್ಳ ಕಾಂಪ್ಲೆಕ್ಸ್, ಮಂಗಳೂರು ರಸ್ತೆ,
ಚಿಕ್ಕಪೇಟೆ, ಮಡಿಕೇರಿ - 571 201
ದೂರವಾಣಿ : 08272/29372

**ಕುಂಭಗೌಡನ ಸೋಮಣ್ಣ**
ಮಯೂರ ಕೋಲ್ಡ್ ಸ್ಟೋರೇಜ್
ಮುಖ್ಯ ರಸ್ತೆ, ಕುಶಾಲನಗರ - 571 234

**ಅಮ್ಮಾಜೀರ ಪೊನ್ನಪ್ಪ**
20, 1ನೇ ಮೈನ್, 4ನೇ ಕ್ರಾಸ್
ಸಾಕಮ್ಮ ಗಾರ್ಡನ್, ಬಸವನಗುಡಿ,
ಬೆಂಗಳೂರು - 04
ದೂರವಾಣಿ - 080/642822

**ಕಲ್ಲುಮುಟ್ಲು ಬಸಪ್ಪ c/o ನಾರಾಯಣ**
ನಂ. 233/9, 2ನೇ ಕ್ರಾಸ್, ನಂಜಪ್ಪ ಬ್ಲಾಕ್,
ಕೆಂಪೇಗೌಡ ನಗರ, ಬೆಂಗಳೂರು - 19
ದೂರವಾಣಿ - 080/6549669






* ಸಂಪಾದಕೀಯ : ಕೊಡಗು ಗೌಡ ಮಹಿಳಾ ಒಕ್ಕೂಟ 02
* ಗೀತೆ : ಜಾಗೃತರಾಗಿ ದೇಶದ ಜನರೇ 02
* ಪಣ್‌ಪುಳಿ ಹಣ್ಣಿನಿಂದ ಹುಳಿನೀರು 03
* ಅರೆಭಾಷೆಯೆಂಬ ಕನ್ನಡದ್ದೊಂದು ರೂಪ 07
* ಪತ್ರ ವಿಭಾಗ : ಅಭಿನಂದನೆ 08
* ಜಾಹೀರಾತು, ಸವಿನೆನಪು 08
* ಕುಲಗುರು ಅಲ್ಲ ಕುಲದೇವರು ವೆಂಕಟರಮಣ 10
* ಪ್ರಕೃತಿದತ್ತ ಕೊಡುಗೆ ಕೊಡಗಿನ ಪುಷ್ಪಗಿರಿ ಬೆಟ್ಟ 11
* ಕಾಫಿಯನ್ನು ಹೇಗೆ ಪತ್ತೆ ಹಚ್ಚಲಾಯಿತು? 12
* ಸರ್ಪಗಂಧ - ಧಾರವಾಹಿ - 12 13
  ಚೆರಿಯಮನೆ ಸಿಂಚನ ಲಂಡನ್‌ಗೆ ಪ್ರಯಾಣ, ನಗೆಹನಿ, ಹನಿಗವನ, 14
* ಕಾರ್ಗಿಲ್ ಸಮರದಲ್ಲಿ ಕೊಡಗಿನ ವೀರ ಯೋಧನ ಮರಣ, 15
* ಹೆಗ್ಗಳಿಕೆ, ಹನಿಗವನ, ಚುಟುಕು 15
* ಗೌಡ ಮಹಿಳಾ ಒಕ್ಕೂಟದ ಪ್ರಬಂಧ ಸ್ಪರ್ಧೆಯಲ್ಲಿ ತೃತೀಯ ಬಹುಮಾನ ಪಡೆದ ಲೇಖನ : ಗೌಡ ಸಂಸ್ಕೃತಿ : ಅಂದು, ಇಂದು, ಮುಂದೆ. 16
* ಮಿಲ್ಲೆನಿಯಮ್ ಮರ್ಮ 18


## ಅರೆಭಾಷಿಕ ವಿಭಾಗ


* ಕಾರ್ಗಿಲ್ ನಿಧಿಗೆ ಗೌಡ ಜನಾಂಗದ ವತಿಂದ ದುಡ್ಡು ನೀಡ್‌ದ ಬಗ್ಗೆ 04
* ಅಂದ್ ನಾ ಕಂಡಂಗೆ "ನಮ್ಮ ಒಂದ್ ಮೊದುವೆ ಜಂಬರ"
  • 'ಸಂಸ್ಕೃತಿಗೆ ಅಪಚಾರ ಆದು ಬ್ಯಾಡ' 05
* ಕರಿಚಿನ್ನ - ಧಾರವಾಹಿ - 30 19
* ಕವನ 20


## ಚಂದಾ ವಿವರ

| | | |
|---|---|---|
| ಬಿಡಿ ಪ್ರತಿ | - | **5 ರೂ.** |
| ಅರ್ಧ ವಾರ್ಷಿಕ | - | **60 ರೂ.** |
| ವಾರ್ಷಿಕ ಚಂದಾ | - | **120 ರೂ.** |

# ಸಂಪಾದಕೀಯ :

## ಕೊಡಗು ಗೌಡ ಮಹಿಳಾ ಒಕ್ಕೂಟ

ಮೇಲ್ಕಂಡ ಸಂಘಟನೆಯ ವಾರ್ಷಿಕ ವರದಿಯನ್ನು ಓದಿದಾಗ ಕೊಡಗಿನ ಗೌಡ ಮಹಿಳೆಯರು ತಮ್ಮ ಸಂಸ್ಕೃತಿಯ ಉದ್ಧಾರಕ್ಕಾಗಿ ಜಿಲ್ಲೆಯಾದ್ಯಂತ ಸಂಘಟನೆಗಾಗಿ ಶ್ರಮಿಸುತ್ತಿರುವುದು ಶ್ಲಾಘನೀಯ ಸಂಗತಿಯಾಗಿದೆ.

ಭಾರತೀಯ ಸಂಸ್ಕೃತಿಯ ಅಂಗವಾದ ಗೌಡ ಸಂಸ್ಕೃತಿ ಬಗ್ಗೆ ನಮ್ಮ ಮಹಿಳೆಯರು ತೋರುತ್ತಿರುವ ಶ್ರದ್ಧೆ ಎಲ್ಲರೂ ಮೆಚ್ಚಬೇಕಾದ ವಿಷಯವಾಗಿದೆ. ಈ ಎರಡು ವರ್ಷಗಳ ಚೇತನಭರಿತ ಉತ್ಸಾಹಿ ಚಟುವಟಿಕೆಗಳು ಇದೇ ರೀತಿ ಮುಂದುವರಿದರೆ ಜಡಭರತನಂತೆ ನಿದ್ರಿಸುತ್ತಿದ್ದ ಸಾಂಸ್ಕೃತಿಕ ಚಟುವಟಿಕೆಗಳು ಸರ್ವತೋಮುಖ ಅಭಿವೃದ್ಧಿಗೆ ನಾಂದಿಯಾಗಿದೆ. ಭಾರತದಲ್ಲಿ ಅದರ ಸಂಸ್ಕೃತಿ ಉಳಿದಿದೆ ಎಂಬುದಾಗಿ ಹೇಳಿದರೆ ಅದಕ್ಕೆ ಹೆಚ್ಚಿನ ಭಾಗ ಸ್ತ್ರೀಯರ ಪಾತ್ರವೇ ಕಾರಣವೆಂದು ಹೇಳಿದರೆ ಅತಿಶಯೋಕ್ತಿಯಾಗದು. ತಾಯಿಯೇ ಮಗುವಿನ ಪ್ರಥಮ ಗುರುವಾಗಿರುವಾಗ ಸಮಾಜದ ಸದಸ್ಯರು, ಸುಸಂಸ್ಕೃತರಾಗುವುದಕ್ಕೆ ಮನೆಯೊಳಗಿರುವ ಸ್ತ್ರೀಯೇ ನಿಜವಾದ ನಿರ್ದೇಶನ ನೀಡುವವಳಾಗಿದ್ದಾಳೆ. "ತೊಟ್ಟಿಲು ತೂಗಿದ ಕೈ ಸಾಮ್ರಾಜ್ಯವಾಳುವ ಕೈ" ಎಂಬ ನಾಣ್ನುಡಿ ಸ್ತ್ರೀಯರನ್ನು ಹೊಗಳಿಸಿ ಅಟ್ಟಕ್ಕೇರಿಸುವ ಮಾತಲ್ಲ. ಅದು ಅಕ್ಷರಶಃ ಸತ್ಯವಾದದ್ದು. ಯಾವ ಸಮಾಜದಲ್ಲಿ ಸ್ತ್ರೀ ವಿದ್ಯಾವಂತಳಾಗಿರದೆ ಅನಕ್ಷರಕುಕ್ಷಿಯಾಗಿರುವಳೋ ಆ ಸಮಾಜದ ಗಂಡಸು ಎಷ್ಟೇ ವಿದ್ಯಾವಂತ ಹಾಗೂ ಹಣವಂತ ನಾಗಿದ್ದರೂ ಆ ಸಮಾಜ ಅಭಿವೃದ್ಧಿಯ ಪಥವನ್ನು ಕಾಣುವುದಕ್ಕೆ ಸಾಧ್ಯವಿಲ್ಲ. ಆದ್ದರಿಂದ ಕೊಡಗಿನ ಗೌಡ ಮಹಿಳೆಯರ ಸಂಘಟನೆಗೆ ಸರಿಯಾದ ಫಲ ಕೊಡಗಿನ ಗೌಡ ಸಮಾಜಕ್ಕೆ ಸಿಗುವುದರಲ್ಲಿ ಸಂಶಯವೇ ಇಲ್ಲ.

ಈಗಿರುವ ಈ ಹುರುಪು ಶ್ರೀ ಕಾವೇರಿ ನದಿಯು ಹರಿಯುತ್ತಿರುವ ರೀತಿ ನಿರಂತರವಾಗಿ ಮುಂದುವರೆದು ಪ್ರತಿಯೊಂದು ಗ್ರಾಮದಲ್ಲೂ ಇದರ ಸಂಪರ್ಕ ಬೆಳೆದು ಸಮಾಜದಲ್ಲಿರುವ ಪಿಡುಗುಗಳಾದ ವರದಕ್ಷಿಣೆ, ಮಿತಿಮೀರಿದ ಕುಡಿತ ಹಾಗೂ ಲಂಚದ ಹಾವಳಿಯತ್ತ ಗಮನ ಹರಿಸಿ ಇವುಗಳ ನಿರ್ಮೂಲನಕ್ಕೆ ಪಣ ತೊಟ್ಟು ಕೆಲಸ ಮಾಡಿ ಸಂಸ್ಕೃತಿಯ ಅಭಿವೃದ್ಧಿ ಜೊತೆಯಲ್ಲಿ ಮಕ್ಕಳ ಕಲ್ಯಾಣ, ಗರ್ಭಿಣಿಯರ ಹಾಗೂ ಬಾಣಂತಿಯರ ಕಲ್ಯಾಣ, ವಿವಾಹ ವಿಚ್ಛೇದನೆ ಮತ್ತು ವಿದ್ಯಾವಂತ ನಿರುದ್ಯೋಗಿ ಮಹಿಳೆಯರು ಸ್ವತಂತ್ರ ಉದ್ಯೋಗವಕಾಶಕ್ಕೆ ಎಡೆ ಮಾಡಲು ದುಡಿಯಲು ಚೈತನ್ಯ ಕೊಡಲೆಂದು ಸಂಗಾತಿಯ ಹಾರೈಕೆ.

### ವಿವೇಕ

ಕೊಡಗು ಸಂಗಾತಿಯ ಪ್ರಯತ್ನ ಶ್ಲಾಘನೀಯವಾದದ್ದು. ಆದರೆ ನಿಮ್ಮ ಕೈಯಿಂದ ಹಣ ಕಳೆದುಕೊಂಡು ಈ ಕೆಲಸ ಮಾಡುವುದು ಬೇಡ. ಈಗ ಎಲ್ಲರೂ ಹೊಗಳಬಹುದು. ಆದರೆ ತೊಂದರೆಗೆ ಸಿಕ್ಕಿದಾಗ ಯಾರು ರಕ್ಷಣೆಗೆ ಧಾವಿಸಲಾರರು.

ಪೂಜಾರಿ ಮೊಣ್ಣಪ್ಪ

## ಜಾಗೃತರಾಗಿ ದೇಶದ ಜನರೇ

ನೆನೆಯಿರೋ ನೆನೆಯಿರೋ ಗತ ವೈಭವ
ಭಾರತದ ಸಿರಿನಾಡ ಪ್ರಕೃತಿ ವಿಭವ ||೧||
ವಿದೇಶಿಯರ ಹಂಗು ನಿಮಗೇಕೆ ಈಗ
ಸ್ವದೇಶಿ ಕಾರ್ಖಾನೆಗಳ ಸೃಜಿಸಿ ಬೇಗ ||೨||
ಸಾಲದ ಹೊರೆಯಿಂದ ಬಳಲಿದೆ ದೇಶ
ಇನ್ನೇಕೆ ಸಾಲ, ರಕ್ಷಿಸಿರಿ ರಾಜ್ಯಕೋಶ ||೩||
ಕಾನೂನು ತನ್ನಿರಿ ಸಕಲರಿಗೆ ಒಂದ
ಜನಸಂಖ್ಯೆ ಹೆಚ್ಚಳಕೆ ಕಾನೂನು ಬಂಧ ||೪||
ಸರ್ವರಿಗು ಸಮಾನ ಅವಕಾಶ ನೀಡಿ
ರಕ್ಷಿಸಿರಿ ಎಲ್ಲರನು ಒಂದೇ ವಿಧದಿ ||೫||
ಶತ್ರುಗಳು ಹೊರಟಿಹರು ದೇಶ ಖಂಡಿಸಲು
ಒಂದಾಗಿ ಚಿಂತಿಸಿರಿ, ರಕ್ಷಿಸಿರಿ ಗಡಿಯ ||೬||
ವಿದೇಶಿ ಪ್ರೇಮಿಗಳಿಗೆ ಪ್ರೋತ್ಸಾಹವೇಕೆ?
ನಿರ್ದಾಕ್ಷಿಣ್ಯದಿ ವರ್ತಿಸಲು ಸುರಕ್ಷಿತವು ದೇಶ ||೭||
ಬೇಲಿಯೆ ಹೊಲವನ್ನು ಮೇದೊಡೆಂತು
ರಕ್ಷಕರಾರು ಬೆಳೆಗೆ ಯೋಚಿಸಿರಿ ಇಂದು ||೮||
ಶಿಲ್ಪಕಲೆಯ ದೇಗುಲಗಳ ರಕ್ಷಿಪರಾರು
ನೈಜ ಸಾಹಿತ್ಯ ಸಂಗಿತ ವಿದ್ಯೆಗೆ ಸಂಚು ||೯||
ಕುಕ್ಕುತಿದೆ ಪಾಶ್ಚಾತ್ಯ ಸಂಸ್ಕೃತಿಯ ಚಂಚು
ರಕ್ಷಿಸಿರಿ ಧೀರತೆಯಿಂ ರಾಷ್ಟ್ರದ ಅಂಚು ||೧೦||
ಎದ್ದೇಳಿ ಭಾರತದ ನವ ತರುಣರೇ
ಕಿತ್ತೆಸೆಯಿರಿ ಭ್ರಷ್ಟಾಚಾರದ ಆಡಳಿತದಿಂದೆ ||೧೧||
ವಂಚಕರ ಹೊರದೂಡಿ ಅಧಿಕಾರದಿಂದ
ದೇಶ ಸರಕಾರಕೆ ನೀಡಿ ಪ್ರಾಮಾಣಿಕ ಶಾಸಕರ ||೧೨||
ಮಾನವೀಯ ಅನುಕಂಪವಿಲ್ಲದ ವ್ಯಕ್ತಿ
ದೇಶದೇಳ್ಗೆಯನು ಸಾಧಿಪುದು ಎಂದು? ||೧೩||
ದುಸ್ವಾರ್ಥಿಗಳ ಕೊಲೆ ಅಪಾಯದ ಕೋಡಿ
ದೂರವಿರಿ ಸಜ್ಜನರೆ ಬಯಸಿರಿ ಶಾಂತಿ ||೧೪||

ಮಂ. ಗಂಗಾಧರ ಗೌ
ಮಂಡೆಕೋಲ

### ಕೊಡಗು ಗೌಡ ವಿದ್ಯಾಸಂಘದಿಂದ ವಿದ್ಯಾರ್ಥಿ ವೇತನ

ಕೊಡಗು ಗೌಡ ವಿದ್ಯಾಸಂಘ ಮಡಿಕೇರಿ ಇವರ ವತಿಯಿಂ ಪ್ರತಿವರ್ಷ ಕೊಡಲ್ಪಡುವಂತೆ ಪ್ರತಿಭಾವಂತ ವಿದ್ಯಾರ್ಥಿಗಳಿ ವಿದ್ಯಾರ್ಥಿವೇತನ ನೀಡಲು ಅರ್ಜಿ ಆಹ್ವಾನಿಸಲಾಗಿದೆ. ಏಳನೇ ತರಗತಿ, ಹತ್ತನೇ ತರಗತಿ, ದ್ವಿತೀಯ ಪಿ.ಯು.ಸಿ. ಪದವಿ ತರಗತಿಗಳಲ್ಲಿ ಹೆಚ್ಚಿನ ಅಂಕ ಗಳಿಸಿರುವ ಅರ್ಹ ವಿದ್ಯಾರ್ಥಿಗಳು, ತಮ್ಮ ಕುಟುಂಬದ ಹೆಸರು ನಮೂದಿಸಿ ಅಂಕಪಟ್ಟಿಯ ನಕಲಿನೊಂದಿಗೆ ಆಗಸ್ಟ್ 20ರೊಳಗೆ ಅರ್ಜಿಗಳನ್ನು ಸಲ್ಲಿಸಲು ಅಂತಿಮ ದಿನಾಂಕವಾಗಿದೆ ಎಂದು ಸಂಘದ ಪ್ರಕಟಣೆ ತಿಳಿಸಿದೆ.

# ಣ್‌ಪುಳಿ ಹಣ್ಣಿನಿಂದ ಹುಳಿನೀರು



ಮಳೆಗಾಲ ಪ್ರಾರಂಭವಾಗುತ್ತಿದ್ದಂತೆ ಪಣ್‌ಪುಳಿ ಮರದಲ್ಲಿ ಹೂಬಿಟ್ಟು ಚಿಕ್ಕ ಚಿಕ್ಕ ಕಾಯಿಗಳಾಗಿ ಹಣ್ಣುಗಳಾಗಿ ಕಾಣಸಿಗುತ್ತವೆ. ಈ ಹಣ್ಣು ಆಗಸ್ಟ್ ಸೆಪ್ಟಂಬರ್ ತಿಂಗಳಲ್ಲಿ ಹಣ್ಣಾಗಿ ಮರದಿಂದ ಕೆಳಗೆ ಬೀಳತೊಡಗುತ್ತವೆ. ಕಿತ್ತಳೆ ಹಣ್ಣಿನ ಗಾತ್ರದ ಅರಶಿನ ಬಣ್ಣದ ಹಣ್ಣುಗಳನ್ನು ಕಂಡಾಗ ತಿನ್ನಬೇಕೆಂದು ಬಾಯಲ್ಲಿ ನೀರೂರುವುದಂತೂ ಸಹಜ. ತುಂಬಾ ಹಣ್ಣಾದಾಗ ದಿನಕ್ಕೆ 50-100 ಹಣ್ಣುಗಳು ಮರದ ಕೆಳಗಡೆ ಬೀಳುತ್ತವೆ. ಇದನ್ನು ಹೆಕ್ಕಿ ತಂದು ಎರಡು ಭಾಗ ಮಾಡಿ ಬೀಜ ತೆಗೆದು ಸೌದೆ ಒಲೆಯ ಮೇಲ್ಭಾಗದಲ್ಲಿ ಬಿದಿರು ಅಥವಾ ವಾಟೆಯ ತಟ್ಟೆಗಳಲ್ಲಿ ಒಂದಕ್ಕೊಂದು ಜೋಡಿಸಿ ಒಣಗಲು ಬಿಡಬೇಕು. ಏಲಕ್ಕಿ ಗೂಡುಗಳಲ್ಲಿ ಸಹ ಬಹಳ ಬೇಗ ಒಣಗುತ್ತದೆ. ನಾಲ್ಕೈದು ದಿನಗಳಲ್ಲಿ ಸಿಪ್ಪೆ ಚೆನ್ನಾಗಿ ಒಣಗಿದ ಕಪ್ಪು ಬಣ್ಣಕ್ಕೆ ತಿರುಗಿದ ನಂತರ ಪ್ಲಾಸ್ಟಿಕ್ ಚೀಲಗಳಲ್ಲಿ ತುಂಬಿಸಿಡಬೇಕು.

ತೆಗೆದ ಬೀಜಕ್ಕೆ ಸ್ವಲ್ಪ ನೀರು ಹಾಕಿ ಮಣ್ಣಿನ ದಪ್ಪ ಮಡಿಕೆ ಅಥವಾ ಚಟ್ಟಿಗಳಲ್ಲಿ ಕಾಯಲು ಇಡಬೇಕು. ನೀರು ಮಂದವಾಗುತ್ತಾ ಕಾಲು ಭಾಗ ಬರುವಾಗ ಕಪ್ಪಾದ ಮಂದವಾದ ಹುಳಿನೀರು ತಯಾರಾಗುತ್ತದೆ. ಇದನ್ನು ಕಾಯಿಸಲು ಗಟ್ಟಿಯಾದ ಸೌದೆ ಸಹ ಹೆಚ್ಚು ಬೇಕಾಗುವುದು. ಈಗ ಕೆಲವು ವರ್ಷಗಳಿಂದ ಸಿಪ್ಪೆಮಾಡಿ ಮಾರಿ ಹಣ ಸಂಪಾದಿಸುತ್ತಾರೆ. ಅಲ್ಲದೆ ಕೇರಳದ ಕಡೆ ಒಳ್ಳೆ ಬೆಲೆಗೆ ಹೋಗುತ್ತದೆ. ಹಾಗೂ ಸಿಪ್ಪೆಗೆ ಕೆಜಿಯೊಂದಕ್ಕೆ ನಲವತ್ತೈದು ಐವತ್ತು ರೂ. ಸಹ ಇದೆ. ಒಂದು ಕೆ.ಜಿ. ಹುಳಿ ನೀರಿಗೆ ಸುಮಾರು ನೂರೈವತ್ತು ಹಣ್ಣುಗಳ ತನಕ ಬೇಕಾಗುತ್ತದೆ.

ನಮ್ಮ ಹಿರಿಯರು ದಟ್ಟಕಾಡು ಬೆಳೆದಿದ್ದ ಅಂದಿನ ಕಾಲದಲ್ಲಿ ಒಂದು ಮರವಿದ್ದರೇ ಒಗ್ಗಟ್ಟಿನಿಂದ ಸೇರಿಕೊಂಡು ಹತ್ತಾರು ಜನ ಸೇರಿ ಮರ ಹತ್ತಿ ಉದ್ದಗಳೆ ಬಡಿಗೆಗಳಿಂದ ಬಡಿದು ಉದುರಿಸುತ್ತಿದ್ದರು. ನಂತರ ಎಲ್ಲರೂ ಹಂಚಿಕೊಂಡು ಕುಕ್ಕೆಗಳಲ್ಲಿ ಹೊತ್ತು ತಂದು, ಅಂಗಳ ಅಥವಾ ಭತ್ತ ಕುಟ್ಟುವ ಕೊಟ್ಟಿಗೆಯಲ್ಲಿ ನಾಲ್ಕು ಗೂಟ ಊರಿ ಅವುಗಳ ಮೇಲೆ ಸಾಲಾಗಿ ಬೈನೆ ಮರದ ಪಟ್ಟಿಗಳನ್ನಿಟ್ಟು ಅದರ ಮೇಲೆ ಉಪಯೋಗಕ್ಕೆ ಬಾರದ ಭತ್ತ ಕಟ್ಟುವ ಕಡಿಕೆಯಲ್ಲಿ ತುಂಬಿಸುತ್ತಿದ್ದರು. ಬೈನೆಮರದ ಪಟ್ಟಿಯ ಕೆಳಗೆ ಬಾಳೆಯ ದಿಂಡಿನ ಹಾಳೆಗಳನ್ನು ಸಾಲಾಗಿರಿಸಿ, ಆ ಹಾಳೆಗಳ ತುದಿಗೆ ಇನ್ನೊಂದು ಹಾಳೆಯನ್ನು ಇರಿಸಿ ಕೆಳಗಡೆ ಒಂದು ದಪ್ಪಗಾದ ಮಣ್ಣಿನ ಮಡಕೆಯನ್ನು ಇಡುತ್ತಿದ್ದರು. ನಂತರ ಹಣ್ಣುಗಳ ಮೇಲೆ ಎರಡು ಬಿಂದಿಗೆ ನೀರನ್ನು ಹೊಯ್ಯುತ್ತಿದ್ದರು. ಆಗ ನೀರು ಸೀದಾ ಕೆಳಗೆಬಂದು ಪಾತ್ರೆಗೆ ಬೀಳುತ್ತಿತ್ತು. ನೀರು ಹೊಯ್ಯುವುದರಿಂದ ಹಣ್ಣು ಬೇಗ ಕರಗುವುದು ಮತ್ತು ಶುಚಿಯು ಆಗುತ್ತಿತ್ತು. ಎರಡನೇ ದಿನದಿಂದ ಹಣ್ಣು ಕರಗಿ ನೀರು ತೊಟ್ಟು ತೊಟ್ಟುಗಳಾಗಿ ಹಾಳೆ ತಟ್ಟೆಗಳ ಮೂಲಕ ಪಾತ್ರೆಗೆ ಬೀಳುವುದನ್ನು ತೆಗೆದು ದೊಡ್ಡ ಮಣ್ಣಿನ ಪಾತ್ರೆಯಲ್ಲಿ ಹಾಕಿ ರಾತ್ರಿಯಿಡಿ ಕಾಯಿಸುತ್ತಾ ಕೂರುತ್ತಿದ್ದರು. ಯಾಕೆಂದರೆ ಮಣ್ಣಿನ ಪಾತ್ರೆಯನ್ನು ಜಾಗರೂಕತೆ ವಹಿಸಿ ನೋಡಬೇಕಾಗುತ್ತಿತ್ತು. ಸುಮಾರು ಆರು ಎಂಟು ಗಂಟೆ ಕಾಯಿಸಿದ ನಂತರ ಕಪ್ಪಾದ ಅತಿ ಮಂದ ಹುಳಿನೀರನ್ನು ತಯಾರಿಸುತ್ತಿದ್ದರು. ಮೂರು ನಾಲ್ಕು ದಿನಗಳಲ್ಲಿ ಹಣ್ಣೆಲ್ಲ ಕರಗಿದ ನಂತರ ಉಳಿದ ಬೀಜವನ್ನು ಒಣಗಿಸಿ ಕುಟ್ಟಿ ಒಡೆದು ಅದರೊಳಗಿರುವ ಕಿತ್ತಳೆ ತೊಳೆಗಳ ಆಕಾರದ ಕೇಸರಿ ಬಣ್ಣದ ಬೀಜವನ್ನು ತೆಗೆದು ಮಣ್ಣಿನ ಓಡಿನಲ್ಲಿ ಹುರಿದು ಕೆಂಪಗಾದ ನಂತರ ಕಲ್ಲಿನ ಒರಳಿನಲ್ಲಿ ಹಾಕಿ ಒನಕೆಯಿಂದ ಕುಟ್ಟುತ್ತಿದ್ದರು. ಕುಟ್ಟುತ್ತಾ ಇದ್ದಂತೆ ಎಣ್ಣೆಯ ಅಂಟಿನಿಂದ ನಿಧಾನವಾಗುವುದು. ನಂತರ ಅದನ್ನೇ ಒರಳಿನಿಂದ ತೆಗೆದು ಪಾತ್ರೆಗೆ ಹಾಕಿ ಸ್ವಲ್ಪ ನೀರುಹೊಯ್ದು ಕುದಿಯಲು ಒಲೆಯ ಮೇಲಿಟ್ಟು ಎಣ್ಣೆ ಅಂಶ ಮೇಲೆ ಬಂದ ಹಾಗೆ ಅದನ್ನು ತೆಗೆದು ಇನ್ನೊಂದು ಪಾತ್ರೆಗೆ ಹಾಕಿ, ಚೆನ್ನಾಗಿ ಕಾಯಿಸುತ್ತಿದ್ದರು. ಆಗ ಅದರಲ್ಲಿ ನೀರಿನ ಅಂಶ ಕಮ್ಮಿ ಆಗುತ್ತಿದ್ದಂತೆ ತುಪ್ಪದ ಪರಿಮಳ ಬರುತ್ತಿತ್ತು. ತಣಿದ ನಂತರ ಹಸುವಿನ ತುಪ್ಪದ ಪರಿಮಳವನ್ನು ಹೋಲುತ್ತಿದ್ದು ಸ್ವಲ್ಪ ತರಿತರಿ ಇದ್ದು. ರೊಟ್ಟಿಯೊಡನೆ ತಿನ್ನುವುದಕ್ಕೂ ಚಕ್ಕುಲಿ, ಕಜ್ಜಾಯ, ವಡೆ ಇತ್ಯಾದಿ ತಿಂಡಿಗಳನ್ನು ತಯಾರಿಸಲು ಉಪಯೋಗಿಸುತ್ತಿದ್ದ ಅಂದಿನ ಆಕಾಲ ನೆಂಟರಿಷ್ಟರಿಗೆಲ್ಲಾ ಹಂಚುತ್ತಿದ್ದರು. ಈಗ ಹಾಗಲ್ಲ ಒಂದು ದೊಡ್ಡ ಮರದಿಂದ ಸುಮಾರು ಎಂಟು ಹತ್ತು ಸಾವಿರ ಆದಾಯ ಬರುತ್ತದೆ. ಪಣ್ ಪುಳಿ ಮರ ಸುಮಾರು ಎಪ್ಪತ್ತು ಎಂಭತ್ತು ಎತ್ತರ ಬೆಳೆಯುತ್ತದೆ. ಮತ್ತು ನಲವತ್ತು ಅಡಿಗಳ ವಿಸ್ತಾರಕ್ಕೂ ಜಾಗವನ್ನು ಆಕ್ರಮಿಸುತ್ತದೆ.




ಲೇಖನ ಬೈತಡ್ಕ ಜಾನಕಿ

# ಕಾರ್ಗಿಲ್ ನಿಧಿಗೆ ಗೌಡ ಜನಾಂಗದ ವತಿಂದ ದುಡ್ಡು ನೀಡ್‌ದ ಬಗ್ಗೆ



ಗೌಡ ಸಮಾಜ ಪತ್ರಕರ್ತರ ಸಂಘಕ್ಕೆ ನಿಧಿ ಅರ್ಪಿಸಿದಾಗ ಗೌಡ ಸಮಾಜದ ಅಧ್ಯಕ್ಷ ತೋಟಂಬೈಲು ನಾಣಯ್ಯ ಅವರಿಂದ ಪತ್ರಕರ್ತರ ಸಂಘದ ಪ್ರಧಾನ ಕಾರ್ಯದರ್ಶಿ ಕೆ. ಕೆ. ದಿನೇಶ್‌ಕುಮಾರ್ 28,500/- ರೂ.ಗಳ ಡಿ. ಡಿ. ಸ್ವೀಕರಿಸಿದರು.



ಸಿಂಗೂರು ಮೇದಪ್ಪ ಅವರ ತಂದೆ ಸಿಂಗೂರು ಕುಟ್ಟಪ್ಪರವರಿ ರೂ. 11,000/- ಗಳನ್ನು ಗೌಡ ಜನಾಂಗದ ಸಂಸ್ಥೆಗಳ ಪರವಾಗಿ ಕೊಡಗ ಗೌಡ ವಿದ್ಯಾ ಸಂಘದ ಅಧ್ಯಕ್ಷ ಕುಯ್ಯಮುಡಿ ಪೂರ್ಣಯ್ಯ ನೀಡುತ್ತಿರುವುದು



ಹಾವುಕಚ್ಚಿ ಮೃತಗೊಂಡ ಯೋಧ ವಿ. ಎಲ್. ಗಣೇಶ್ ಪತ್ನಿ ಕಸ್ತೂರಿ ಅವರಿಗೆ ನಿಧಿ ಅರ್ಪಣೆ, ಕುಯ್ಯಮುಡಿ ಪೂರ್ಣಯ್ಯ ಅವರ ಮೂಲಕ ರೂ. 15,000/-ಹಸ್ತಾಂತರ



ಹುತಾತ್ಮಯೋಧ ಪೆಮ್ಮಂಡ ಡಿ.ಕಾವೇರಪ್ಪ ಕುಟುಂಬಕ್ಕೆ ತುಂತಜೆ ಗಣೇಶ್ ಅವರು ಮೃತ ಯೋಧನ ಸಹೋದರನಿಗೆ ರೂ. 10,000/- ನೆರವು ಹಸ್ತಾಂತರ ಮಾಡಿದರು.

ತಾರೀಖ್ 26-7-1999ರ ಸೋಮ್‌ವಾರ ಮಧ್ಯಾಹ್ನ 12-00 ಗಂಟೆಗೆ ಸರಿಯಾಗಿ ಮಡಿಕೇರಿಲಿರ್‌ವ 'ಪ್ರೆಸ್‌ಕ್ಲಬ್'ಲಿ ಕೊಡಗ್ ಗೌಡ ಸಮಾಜ, ಕೊಡಗ್ ಗೌಡ ವಿದ್ಯಾಸಂಘ, ಕೊಡಗ್ ಗೌಡ ಸಾಂಸ್ಕೃತಿಕ ಅಕಾಡೆಮಿ ಮತ್ತೆ ಮೂರ್ನಾಡ್ ಗೌಡ ಸಮಾಜದವ್ ಮತ್ತೆ ಜನಾಂಗದ ಹಲವಾರ್ ಗಣ್ಯರ್ ಸೇರಿ ಜಿಲ್ಲಾ ಪತ್ರಕರ್ತರ ಸಂಘದ ಮುಖಾಂತರ ರೂ. 28,500/- ರೂಪಾಯಿಗಳ ಡಿ.ಡಿ. ನ ಕಾರ್ಗಿಲ್ ನಿಧಿಗೆ ಕಳ್ಸಿಕೊಟ್ಟೊ. ಅದೇ ರೀತಿ ಕಾರ್ಗಿಲ್ ಯುದ್ಧಲಿ ಹುತಾತ್ಮರಾದ ಸಿಂಗೂರ್ ಮೇದಪ್ಪ ಮತ್ತೆ ಪೆಮ್ಮಂಡ ಕಾವೇರಿಯಪ್ಪ ಹಾಗೂ ಜಮ್ಮುಲಿ ಹಾವ್ ಕಚ್ಚಿ ತೀರಿಕಂಡ ಒಕ್ಕಲಿಗರ ಎಲ್. ಗಣೇಶ್ ಇವ್ರ ಮನೆವ್‌ಕೆ ದುಡ್ಡ್‌ನ ಸಹಾಯ ಮಾಡ್ಡೊ. ಆಗ ನಡ್ಡ ಸಭೆಲಿ ಗೌಡ ಸಮಾಜದ ಅಧ್ಯಕ್ಷ ತೋಟಂಬೈಲ್ ನಾಣಯ್ಯ, ಕಾರ್ಯದರ್ಶಿ ಪೈಕೇರ ಅನಂತರಾಮ, ಖಜಾಂಚಿ ಕರ್ಣಯ್ಯನ ವಿಶ್ವನಾಥ, ನಿರ್ದೇಶಕರ್ ಆದ ಕಾಳೇರಮ್ಮನ ಪಾಲಾಕ್ಷ, ಪೇರಿಯನ ಜಯಾನಂದ, ದಂಬೆಕೋಡಿ ಪೂವಯ್ಯ, ಪಟ್ಟೆಮನೆ ಶೇಷಪ್ಪ, ಕೋರನ ವಿಶ್ವನಾಥ, ಹುದೇರಿ ನಾಗೇಶ್, ಕೊಡಗ್ ಗೌಡ ವಿದ್ಯಾ ಸಂಘದ ಅಧ್ಯಕ್ಷ ಶ್ರೀ ಕುಯ್ಯಮುಡಿ ಪೂರ್ಣಯ್ಯ, ಉಪಾಧ್ಯಕ್ಷ ಪಂಜಿಪಳ್ಳ ವೆಂಕಪ್ಪ, ಖಜಾಂಚಿ ಕೂಡಕಂಡಿ ಕಾವೇರಿಯಮ್ಮ ಸೋಮಣ್ಣ ಕೊಡಗ್ ಗೌಡ ಸಾಂಸ್ಕೃತಿಕ ಅಕಾಡೆಮಿ ಅಧ್ಯಕ್ಷ ತುಂತಜೆ ವೆಂಕಟೇಶ್ ಪ್ರಧಾನ ಕಾರ್ಯದರ್ಶಿ ಕೋಡಿ ಚಂದ್ರಶೇಖರ್, ನಿರ್ದೇಶಕರ್ ಆದ ಕುಕ್ಕುನೂರು ಎನ್. ಸೋಮಣ್ಣ, ಕುಂಜಿಲನ ಸತೀಶ್, ಕರಕರನ ಟಿ. ಉತ್ತಯ್ಯ, ಕುದುಪಜೆ ಚಿನ್ನಪ್ಪ, ಅಲ್ಲದೆ ಕೊಡಗ್ ಜಿಲ್ಲಾ ಪಂಚಾಯತ್ ಅಧ್ಯಕ್ಷ ಶ್ರೀ ಊರ್‌ಬೈಲ್ ಪಿ. ಜಯಪ್ರಕಾಶ್ ಕುಶಾಲನಗರದ ಗೌಡ ಸಮಾಜ ಅಧ್ಯಕ್ಷ ಕೋರನ ಪೂಣಚ್ಚ, ಕಾಜೂರಿನ ಕೂಡಕಂಡಿ ಬಾಲಕೃಷ್ಣ ಮುಂತಾದವ್ ಇದ್ದೊ. ಸುರ್‌ಲಿ ಕೋಡಿ ಚಂದ್ರಶೇಖರ್ ಸ್ವಾಗತಿಸಿದೊ. ಕೊನೇಲಿ ಹುದೇರಿ ನಾಗೇಶ್ ಬಂದವ್‌ಕೆ ಧನ್ಯವಾದ ಅರ್ಪಿಸಿದೊ. ಯುದ್ಧಲಿ ತೀರಿಕಂಡವ್‌ಕೆ ಎರಡ್ ನಿಮಿಷ ಮೌನ ಆಚರಿಸಿದೊ.

— ಕೋಡಿ ಚಂದ್ರಶೇಖರ್

# ಂದ್ ನಾ ಕಂಡಂಗೆ "ನಮ್ಮ ಒಂದ್ ಮೊದುವೆ ಜಂಬರ" 'ಸಂಸ್ಕೃತಿಗೆ ಅಪಚಾರ ಆದು ಬ್ಯಾಡ'

(ಕಳೆದ ಸಂಚಿಕೆಂದ ಮುಂದುವರ್‍ದ್ದ್)

ಇಂದ್ ಮೊದುವೆ ಮಾಡಕ್ಕುತ್ತೇಳ್‍ರೆ 'ತಂದ್‍ಗಾರರೇ' ಇಲ್ಲೆ ! ಧ್‍ಲ್‍ಗೆ ಗೂಡೆನು ಹೈದನು ಗುಟ್ಟಾಗಿ ಪ್ರೀತ್ಸಿ ಕಂಡ್ ನಾವಿಬ್ಬರೂ ೊದುವೆಯಾದವೇತ್ತೇಳ್ಕ್‍ನೇ ಅಪ್ಪ ಅವ್ವಂಗೆ ಗೊತ್ತು ! ಈಗ ಗೂಡೆನು ೈದನು ಪರಿಸ್ಪರ ಒಪ್ಪಿಕ್ಕಂಡ್ರೆ ಆತ್ ಅಪ್ಪ ಅವ್ವನ ಒಪ್ಪಿಗೆ ಬೇಕಿಲ್ಲೆ ! ಯಾವ ಜಾತಿಯಾದರೇನ್ ಪ್ರೀತಿಗೆ ಬೆಲೆ ! ಇಲ್ಲದಿದ್ದರೆ ನಾವು ತ್ತ್ರವೆತ್ತೇಳಿ ಹೆದ್‍ರ್‍ಸ್‍ವೆ. ಇಂದಿನ ನಾಗರಿಕತೆಗೆ ಸರಿಯಾಗಿ ಜನಸಂಖ್ಯೆ ಜಾಸ್ತಿಯಾಗಿ, ಹಳ್ಳಿಲಿ ಮೊದುವೆ ಮಾಡವು ಬಾರಿ ಕಮ್ಮಿ. ಕಾಲ ಬದ್‍ಲಾದುಲೆ. ಆದ್ರೆ ಜನ ಬದಲಾದ್‍ರ್‍ಂದ ಸಾಕಷ್ಟು ಕಲ್ಯಾಣಮಂಟಪಗ, ಸಮಾಜಗ, ಈ ಕಲ್ಯಾಣ ಕಾರ್ಯಕ್ಕಾಗಿ ಸೃಷ್ಟಿಯಾಗುಟು. ಇಂದಿನ ಸಮಾಜದ ಬೆಳವಣಿಗೆಗೆ, ಅನುಕೂಲತೆಗೆ, ಇವುಗಳ ಅಗತ್ಯ ಉಟ್ಟು. ಇಂದಿನ ಜನಾಂಗಕ್ಕೆ ಒಮ್ಮೆ ಆ ಮೊದುವೆ ಜಂಬರ ಹೆಂಗೊ ಮುಗ್ದರೆ ಸಾಕ್. ಆದ್ ಪದ್ಧತಿ, ಆಚಾರ, ವಿಚಾರ, ಸಂಸ್ಕೃತಿಲಿ ನಡೆಯಕುತ್ತೇನ್‍ಲ್ಲೆ ! ಇಂದ್ **ಕಾರ್‍ಬಾರ್** ಮಾಡ್‍ಕೆ ಪುರ್ಷೊತ್ತಿಲ್ಲೆ ! ಯಾಕೆತ್ತೇಳ್‍ರೆ ಇಂದಿನ ಜೀವನ**ದೆ** ಮೆಟ್ಟ **ಹಂ**ಗೆ ಉಟ್ಟು. ಏನೇ ಆದರೂ ನಮ್ಮ ಸಂಸ್ಕೃತಿನ ಬುಟ್ಟು ಕಾರ್‍ಬಾರ್ ಮಾಡಕ್ಕುತ್ತಿಲ್ಲೆಲಾ ! ಈಗ ಒಂದೊ ನಮ್ಮ ಸಂಸ್ಕೃತಿನ ಸರಿಯಾಗಿ ಕ್ರಮಲಿ ಶಾಸ್ತ್ರೋಕ್ತವಾಗಿ ಮಾಡಕು ಇಲ್ಲದಲ್ಲಿ ಯಾವ ಪದ್ಧತಿನೇ ಬ್ಯಾಡ 'ಅರ್ಧಂಬರ್ದ ಪದ್ಧತಿಗಳ ನಡ್ಸಿ ಇರುವ ಸಂಸ್ಕೃತಿಗೆ ಅಪಚಾರ ಯಾಕೆ ಮಾಡ್ದು? ಎಲ್ಲಾ ನಾವು ನಮ್ಮ ಅನುಕೂಲಕ್ಕಾಗಿ ಅನುಕೂಲ ಶಾಸ್ತ್ರ ಮಾಡುದಾದರೆ ಅದ್ರ ಅಗತ್ಯ ಏನ್ ಉಟ್ಟು? ಆ ಸಂಸ್ಕೃತಿನ ಪವಿತ್ರತೆಗೆ ಅವಮಾನ ಆದುಲೆಯ? ಈಗ ನೋಡಿ ಮೊದ್‍ಲೆ ಹೇಳ್ದಂಗೆ ಗೂಡೆನು ಹೈದನು ಒಪ್ಪಿಯಾದ ಮ್ಯಾಲೆ, ವೀಳ್ಯಶಾಸ್ತ್ರ, ಲಗ್ನಪತ್ರಿಕೆ ಎಂಗೇಜ್‍ಮೆಂಟ್, ರಿಂಗ್ ಪಾಸಿಂಗ್‍ತ್ತೇಳಿ ಯಾವುದಾದರೊಂದಕ್ಕೆ, ಮನೇಲಿ ಯಾ ಹೋಟೆಲ್‍ಲಿ ಏರ್ಪಾಡಾದೆ. ಈಗ ಹೋಟೆಲ್‍ಲಿ ಏರ್ಪಾಡಾತ್‍ತತಿಳ್ಕಣಿ ಅಪ್ಪನು ಅವ್ವನು ಫೋನ್‍ಲಿ ಅವುಕೆ ಬೇಕಾದವುಕೆ ಮಾತ್ರ ತಿಳಿಸಿ. ಬೆಳಿಗ್ಗೆ 11-00 ಗಂಟೆಗೆ ಎಲ್ಲವು ಇಂತ ಹೋಟೆಲ್‍ಗೆ ಎಂಗೇಜ್‍ಮೆಂಟ್‍ಗೆ ಬಂದ್‍ಬುಡಕುತ್ತೇಲಿ ಹೇಳ್‍ವೆ. ಎಲ್ಲವು ಬಂದ ಮ್ಯಾಲೆ ನಾಮಾಕವಸ್ತೆಗೆ ಎರಡು ನೈಲಾನ್ ಚಾಪೆ, ಮಣೆ, ದೀಪ, ಚೊಂಬ್‍ಲಿ ನೀರ್ ಇಟ್ಟ್‍ಕ್ಕಂಡ್ ಪದ್ಧತಿನ ಹರ್‍ಕೆ ಒಪ್ಪುವೆ. ಯಾಕೆತ್ತೇಳ್‍ರೆ, ಹೋಟೆಲ್ ಆದ್ರಂದ, ಬಾರ್‍ಲಿ ಇರುವ ತರತರದ ಕುಪ್ಪಿಗ ಇವರ್‍ನ ಕೈ ಬೀಸಿ ಕರೀತಿದ್ದವೆ. ಪದ್ಧತಿ ಮುಗ್ಸಿದ ತಕ್ಷಣ ಕುಡಿಯಕೆ ಸುರಾತ್ ಆಗ ಗೂಡೆನು ಹೈದನು ಗತ್ತ್‍ಲಿ ಕೈ ಕೈ ಹಿಡ್ಕಂಡ್ ಬಂದವರ್‍ನೆಲ್ಲಾ ಮಾತಡ್ಸಿಕಂಡ್ ಬಂದವೆ. ಆಗ ಒಬ್ಬೊಬ್ಬನ ಕೈಲಿರುವ ಗ್ಲಾಸ್‍ಗ ಅವರೊಟ್ಟಿಗೆ ಮಾತಾಡ್ದು ಸ್ಟೈಲೇ ಬ್ಯಾರೆ. ಒಬ್ಬೊಬ್ಬ ಕುತ್ತಿಗೆ ಮುಟ್ಟಕುಡ್ದ್ ವಾಲಾಡಿಕ್‍ಡ್ ಜೆಲ್ಲ್ ಸೋರಿಸಿಕಂಡ್ ಹೋಕನ ವೀಡಿಯೊದಂವ ಅವನ ಪೋಸ್ ತೆಗೆಯದು ನೋಡಕು ಪದ್ಧತಿ ಆದಂಗೆ, ಉಂಗುರ ಹಾಕುದು ಹೈದನು ಗೂಡೆನು ಎದ್‍ರೆ ಬದರ್ ನಿಂತ್‍ಕಂಡ್ ಉಂಗುರ ಮತ್ತೆ ಚೈನ್ ಪರಸ್ಪರ ಹಾಕಂಡವೆ. ಆಗ ಹೆಣ್ಮಕ್ಕ ನಮ್ಮ ಕಾಲಲಿ ಇದೆಲ್ಲಾ ಇತ್ತಾ ! ಎಂತ ಕಲಿಕಾಲ ! ನಮ್ಮನ ಸರಿಯಾಗಿ ಹೈದನ ನೋಡ್‍ಕೆ ಬುಟ್ಟತ್‍ದೆತ್ತೇಲಿ ಸೆರ್ಗ್ ಮುಚ್ಚಿಕಂಡ್ ಗೊಣಗುದು. ಉಂಗುರು, ಚೈನ್ ಹಾಕಿ ಆದಂಗೆ ಕೇಕ್ ಕಟ್ ಮಾಡ್ದ್. ಇದುಸಾ ಹೈದ ಕೇಕ್ ಕಟ್ ಮಾಡಿ ಗೂಡೆನ ಬಾಯಿಗೆ ಕೊಡ್ದು, ಹಂಗೆ, ಗೂಡೆ ಹೈದನ ಬಾಯಿಗೆ ಕೊಡ್ದು, ನಡ್ದದೆ, ಹಿಂದೆನ ಕಾಲಲಿ ಬೆಲ್ಲ ಚೂರ್‍ನ ಬಾಯಿಗೆ ಕೊಡುತ್ತಿದ್ದೊ ಮತ್ತೆ ಎಲ್ಲವುಕೆ ಹಂಚುವೆ. ಅಷ್ಟೊತ್ತಿಗೆ ಅಲ್ಲಿದ್ದವುರ್‍ಲಿ, ಅಯ್ಯೋ ನಮ್ಮ ಕಾಲಲಿ ನಮಿಗೆ ಅನ್ನದ ಮುದ್ದೆಸ ಕೊಟ್ಟತ್ತ್‍ಲೆ ಇದೆಲ್ಲಾ ಇಪರೀತಾ ಆತ್ ಎನ್ನಾಡ್ದು ನಮಿಗೆ ಮರ್ಯಾದಿಲ್ಲಾದಾತ್ ! ಇವರ್‍ದೆಲ್ಲಾ ಕುಡುಕತನ ನಡಿಯಕ್ಕನ ಊಟ ಸುರಾದೆ. ಅದೊಂದು ಸುಟ್ಟ ಬಫೆಗಡ. ಸುಮಾರ್‍ಜನಿಗೆ ಬಫೆತ್ತೇಳ್‍ರೆ ಗೊತ್ತ್‍ಲೆ. ಅದರ್‍ಲ್ಲ ಹೆಂಗೆ ಊಟ ಮಾಡ್ದ್‍ತ್ತೇಳಿ ತಲೆಬಿಸಿ, ಯಾಕೆತ್ತೇಳ್‍ರೆ ಇವಂಗೆ ಮನೆಲಿ ಅಡ್ಡ ಬೆಂಚೊ, ಮಣೇ ಮುಕ್ಕಾಲೊ, ಇಲ್ಲೆ ಮೇಜಲೊ ಕುದ್ದು ಊಟ ಮಾಡಿ ಅಭ್ಯಾಸ. ಇಂವ ಹೊಟೆಲ್ ಕಂಡದೆ ಅಂದ್ ! ಕುಡ್ದ ಮಸ್ತ್‍ಗೆ ಊಟದ ತಟ್ಟೆ ಜೊತೆಗೆ ಕೈ ಉಜ್ಜುವ ಕಾಗದ ತಕ್ಕಂಡ್ ಕ್ಯೂ ನಿತ್ತವರ ಮಧ್ಯೆಲಿ ಚೈ ಚೈತ್ತೇಳಿಕ್ಕಂಡ್ ನಿತ್ತ್‍ಕ್ಕಣ್‍ಕನ ಬಾಕಿದ್ದವರ ಮೊಖ ನೊಡಕು ! ಹೆಂಗೊ ಜಗ್ಗಿಕ್ಕಂಡ್ ಅನ್ನ, ಮಾಂಸ, ಸಾರ್, ಪಲಾವು, ಕಬಾಬ್, ಪಾಯಸ, ಸ್ವೀಟ್, ಎಲ್ಲನ ಒಟ್ಟಿಗೆ ಹಾಕಂಡ್, ಕಾಣದ ನಾಯಿಕಡಬ್ ತಿಂದಂಗೆ, ಇಂವ ಒಂದು ಮೂಲೆಲಿ ಮುಕ್ಕ್‍ಕನ ಅಂವನ ಗಡ್ಡ, ಮೀಸೆ, ಮೂಕ್ ಹೇಳ್ದೆ. ಎಂತ ಊಟ ಮಾಡ್ದ್‍ತ್ತೇಳ್ದೊನ. ಇದನ್ನೆಲ್ಲಾ ನೋಡ್ಕಂಡ್ ಒಂದು ಗುಂಪು ದೂರಲಿ ನಿತ್‍ಕಂಡ್, ಇವೆಲ್ಲಾ ಯಾಗ ಮುಂದಕ್ಕೆ ಬಾದು? ಹಿಂಗೆ ನಮ್ಮ ಮರ್ಯಾದಿ ತೆಗೆಯದುತ್ತೇಳಿ ಪರಿಹಾಸ್ಯ ಮಾಡುವೆ ! ಊಟಾದ ಮ್ಯಾಲೆ ಹೇಳದೆ ಕೇಳದೆ ಅವರವರ ಪಾಡಿಗೆ ಹೋದೆ.

ಇನ್ನ್ ಮೊದುವೆಲಿ ಕಾಂಬೊನೊ. ಈಗ ಮೊದುವೆ ಮಂಟಪಲಿ ನಡೆಯದುತ್ತೇಳಿ ನಿಶ್ಚಯ ಆಗುಟು. ಎಲ್ಲಾ ಬಂಧುಬಳಗಕ್ಕೆ ಕಾಗದ ಕೊಟ್ಟಾತ್. ಚಪ್ಪರ, ಮೂರ್ತ ಎರಡು ಮಂಟಪಲಿಗಡ. ಅದೂ ದಂಪತಿ ಮೂರ್ತಿ. ಚಪ್ಪರದಂದ್ ಸಾಯಂಕಾಲ ಸಾಕಷ್ಟ್ ಜನಕ್ಕೆ ಚಪ್ಪರಕ್ಕೆ ಆಹ್ವಾನ. ಸುಮಾರ್ ಜನಕ್ಕೆ ಚಪ್ಪರಕೆ ಬಾಕೇಳಕುತ್ತಿಲ್ಲೆ ! ಅವೇ ಬಂದವೆ ! ಯಾಕೆತ್ತೇಳ್‍ರೆ ನಾವೆಲ್ಲಾ ವರ್ಷಕ್ಕೆ ಸುಮಾರ್‍ತ್ತೇಳ್‍ರೆ ಐವತ್ತು ಮೊದುವೆಗೆ ಹೋದವೆ. ಕೆಲವು ಚಪ್ಪರಲಿ ನಾನು ಒಬ್ಬನ ಯಾಗೋಳು ಕಂಡನೆ. ಪರಿಚಯ ಇಲ್ಲೆ ! ಮದುವೆ ಮಾಡುವರ್‍ನ ಕೇಳ್‍ರೆ ಅಂವ ಯಾರ್‍ತ ಗೊತ್ತಿಲ್ಲೆ ! ಅಂತವು ಸುಮಾರ್ ಜನವಳೊಗಡ ! ಶಾಸ್ತ್ರ ಎಲ್ಲಾ ಚಪ್ಪರದಂದ್ ಸಮಾಜಲಿ ಸಾಯಂಕಾಲ ಐದು ಗಂಟೆಗೆ ಸುರಾದೆ. ಸಮಾಜಲಿ ಧೂಳ್ ತುಂಬಿ ತೂಗ್ ಹಾಕಿದ ಕುಲಗುರು ವೆಂಕಟರಮಣನ ಪೊಟೋಕೆ ಅಕ್ಕಿ ಹಾಕುದರೊಟ್ಟಿಗೆ ನಾಕ್ ಪೈಪುಗಳ ಕಂಬದ ಮಧ್ಯೆ ಇಲ್ಲೈ ಕಂಬಗಳೇ ಇಲ್ಲದ ಮಂಟಪಲಿ ಶಾಸ್ತ್ರಕ್ಕೆ ಕೂರ್‍ಸುವೆ ಚಪ್ಪರದಂದ್ ಬೆಳಿಗ್ಗೆಂದ ಕುಡ್‍ಕಂಡ್ ಇರುವ ಮುಖ್ಯಸ್ತಂದ ಹತ್ತ್ ಕುಟುಂಬ ಒಕ್ಕಣೆ, ತೊಳಿಯದೆ ಮೊಸಿ ಹಿಡ್ದ ಎಣ್ಣೆ ಸೋರಿಕೊಂಡಿರುವ ತೂಗ್‍ದೀಪಗಳ ಮಧ್ಯೆ ಸುರಾದೆ ನಮ್ಮ ಶಾಸ್ತ್ರ ! ಹೆಸ್ರ್‍ಗೆ ಎಣ್ಣೆ ಅರಿಶಿನ ಶಾಸ್ತ್ರ ಮಾಡಿ ಮೀಯಕ್ಕೆ ಹೋದವೆ. ಮೀದ್ ಬಾಕನ ಯಾವುದೊ ಒಂದು ಮರ ನೆಟ್ಟ್‍ಗಂಗೆಪೂಜೆ (ಕೆಲವು ಮದುವೆಲಿ ಗಂಗೆ ಪೂಜೆ ಇಲ್ಲೆ) ಯಾಗಿಬಾಕನ ಸೇರ್‍ದ ಜನ ಒಂದುಕಡೆ ಉಬರಿಮೀನ್ ಹತ್ತಿದಂಕೆ ಕೈಲಿ ಗ್ಲಾಸ್ ಹಿಡ್ಕಂಡ್. ಕ್‍ಳ್ಳ್‍ಗೆ ನೂಕ್ ನುಗ್ಗುಲು.

ಮುಂದೆ ಗೂಡೆಗೆ ಶಾಸ್ತ್ರ ಆಕಂಡಿರ್‌ಕನೇ ಊಟಕ್ಕೆ ಏರ್ಪಾಡ್. ಹಸೆ ಬರೆಯುವಲ್ಲಿ ಒಂದು ಬಟ್ಟೆಗೆ ಬರ್‍ದ್ ತೂಗ್ ಹಾಕುದು. ಕರಿಕೊಡೆಗೆ ಬಿಳಿ ಬಟ್ಟೆ ಅಪರೂಪ. ಕಂಚಿಮಿ ಮತ್ತೆ ಅಡುಳಿ ಯಾರ್ ಬೇಕರೆ ಆಕ್. ಹೈದ, ಶಾಸ್ತ್ರ ಮುಗ್ದ್‌ಂಗೆ ಫ್ರೆಂಡ್ಸ್‌ಗಳನ ಕಳ್ಳ್‌ಕೊಟ್ ಸುಧಾರಣೆ ಮಾಡ್ದ್. ಜೊತೆಗೆ ಅವನೂ ಒಂದು ಪೆಗ್ ಏರ್‍ಸಿಕಂಡ್ ಕೈಲೊಂದು ಸಿಗರೇಟ್ ಬ್ಯಾರೆ. ! ಶಾಸ್ತ್ರ ಆಗಿ ಮದರಂಗಿ, ಇಟ್ಟ್ ಆಕನ ಊಟಾದ ಜನ ಕವರ್ ಕೊಡ್‌ಕೆಬಾದು. ಬಾಕನ ಕೈಲಿ ಮದರಂಗಿ ಇರ್‍ದರಂದ ಕವರ್ ತಕ್ಕಾಣ್‌ಕ್ಕಾದುಲೆ. ಇದ್ರುಂದ ಒಂದು ಮೊದುವೆಲಿ ಮಾತಿಗೆ ಮಾತ್ ಬೆಳ್ದ್ ಹೊಡ್‌ದಾಟ ಮಾಡಿಕ್ಕಂಡ್ ಕವರ್‌ನ ತಮ್ಮ ಜೋಬ್‌ಲಿ ಹಾಕಂಡ್ ಹೋದೋ ! ಇದೂ ಸಹ ನಮ್ಮ ಸಂಸ್ಕೃತಿತ್ತೇಳಿ ವಿಡಿಯೊದಂವ ಲಾಯಾಕ್ಕಾಗಿ ಕವರ್ ಮಾಡಿ ಪೋಟೋ ತಕ್ಕಣ್‌ದು. ಇದೆಲ್ಲಾ ಮುಗ್ದ ಮ್ಯಾಲೆ, ಬೆಳಿಗ್ಗೆ ಆರು ಗಂಟೆಗೆ ಧಾರೆ, ಮೂರು ಗಂಟೆಗೆ ಎರಡೂ ಕಡೆಯವು ಎದ್ದ್, ಒಂದು ಗಂಟೆ ಮುಖ್ಯಸ್ತರನ ಹುಡುಕಿ, ನಾಲ್ಕು ಗಂಟೆಗೆ ಶಾಸ್ತ್ರ ಸುರು. ಸಮಾಜಲಿ ಶಾಸ್ತ್ರಕ್ಕತ್ತೇಳಿ ಮನೆಂದ ಎಲ್ಲಾ ಬೇಕಾದ ಸಾಮಾನುಗಳ್ನ ತಂದಿದ್ದವೆ. ಆದ್ರೆ ಶಾಸ್ತ್ರ ಸಮೇಲಿ ಬೇಕಾದ ವಸ್ತು ತಾಕೆ ಮರ್‍ತೋಗಿದ್ದದೆ. ಪದ್ಧತಿ ಪ್ರಕಾರ ನೆಂಟ್ರ ಮಾತಡ್ಸ್‌ದು. ಡ್ರೆಸ್ ಇಲ್ಲದೆ ! ಈ ಸಂದರ್ಭಲಿ ಎರಡ್‌ಕಡೆಂದ ಆಗಿ ಹತ್ತು ಹನ್ನೆರಡು ಜನ ಇದ್ದವೆ. ದಿಬ್ಬಣ ಮಾತಾಡ್ಸಿ, ಮದುವಣನೆರೆಗೆ, ಅಲ್ಲೇ ಇದ್ದ ಕೋಲ್‌ಕಡ್ಡಿ, ರೋಡ್ ಮೆಟ್ಲಿಂಗ್ ಕಲ್ಲ್ (ಚಾಣೆಕಲ್ಲ್‌ಗಂಧದ ಕೊರ್ಡ್‌ನ ಬದಲ್) ಹಿಡ್ಕಂಡ್ ಸೋದರದವು, ಪಟ್ಟೆದಾರರಿಲ್ಲದೆ ಶಾಸ್ತ್ರ ಮುಗಿಸುವೆ. ಅಲ್ಲಿಂದ ದೇವಸಭೆ ಮತ್ತೆ ಧಾರೆಗೆ ತಯ್ಯಾರಿ ನಡ್ದ್‌ದೆ. ದೇವಸಭೆಲಿದ್ದವು ತಮ್ಮ ಸಾಯಂಕಾಲದ ಕಳ್ಳ್‌ದು ಹುಳಿವಾಸನೆ ಮತ್ತೆ ಮೊಖ ತೊಳೆಯದೆ ಹಲ್ಲುಜ್ಜದ ಬಾಯಿ ವಾಸನೆಗಳ ಪರಿಮಳಂದ ಶಾಸ್ತ್ರಗಳನ್ನ ನಡ್ಸಿ. ಒಕ್ಕಣೆಗಳನ ತೊಡ್‌ಲಿಕಂಡ್‌ಹೇಳಿ, ದೇವಸಭೆನ ತಮ್ಮ ಸಿಗರೇಟ್ ಬೀಡಿಂದ ಧೂಮ ಸಭೆಯಾಗಿ ಮಾಡಿ ಮುಗ್ಸುವೆ. ಈ ಮಧ್ಯೆಲಿ ಹೆಣ್ಮಕ್ಕ ಧಾರೆಗೆ ಬಣ್ಣ ಬಂಗಾರ ತೊಡಿಗೆ ಗ್ಯಾನ ಬಂದ ಪದ್ಧತಿಗಳನ ಮಾಡಿ ಹಿಂದಿರುಗುವೆ. ಶಾಸ್ತ್ರದ ಉದ್ದಕ್ಕೂ ಯಾವುದೇ ಸೊಬಾನೆ ಹೇಳುವ ಕ್ರಮ ಇಲ್ಲೆ. ಕೆಲವು ಕುಟುಂಬಗಳ ಪದ್ಧತಿ ಪ್ರಕಾರ ಹೂನಳಿಗೆ ತಾದುಲೆ ! ಧಾರೆಗಾಕನ ಸೋದರದವು ಇಲ್ಲದ್ರುಂದ ಸೋದರಮಾವ ಗೂಡೆನ ಎತ್ತಿಕ್‌ಡ್ ಬಾದ್‌ಲೆ. ಸೀದ ಕರ್‌ಕಂಡ್ ಬಂದ್ ನಿಲ್ಸಿ. ಹೈದನು ನೆಟ್ಟಿಗೆ ಕರಕಂಡ್ ಬಂದ್ ನಿಲ್ಲಿಸಿ ಅಲ್ಲಿ ಮುಖ್ಯಸ್ತರ ಸೂಚನೆ ಪ್ರಕಾರ ಪದ್ಧತಿನ ನಡ್ಸಿ ಕಂಚಿಮಿ ಬದಲಾಯಿಸಿ, ಅಪ್ಪ ಅವ್ವ ಧಾರೆಯೆರ್‍ದವೆ. ಮುಖ್ಯಸ್ತ ಅರ್ಧಂಬರ್ಧ ಒಕ್ಕಣೆ ಹೇಳಿ ಬಾಯಿ ಮುಚ್ಚಿದೆ. ಬ್ರಾಹ್ಮಣಧಾರೆಯಾದರೆ, ಮಂಡಲ ಬರ್‍ದ್, ಅವನೇ ಮಾಡ್ದರಂದ ಸ್ವಲ್ಪ ಕ್ರಮಲಿ ನಡ್ಪದೆ! ಇಲ್ಲಿ ವಿಶೇಷತ್ತೇಳ್‌ರೆ ಎಲ್ಲವರ ಕಾಲ್‌ಲಿ ಷೂ ಚಪ್ಪಲಿ ಇದ್ದದೆ ! ಮುಂದೆ ಹಾಲ್ ತುಪ್ಪ ಶಾಸ್ತ್ರದ ಹರ್‌ಕೆ ಒಪುಸುವೆ. ಬೆಳಿಗ್ಗೆನ ಬೇಯದ ಉಪ್ಪಿಟ್ಟು ಇಲ್ಲೆ ! ವಿಚಿತ್ರ ಅನ್ನನ ತಿಂದ್, ಕರಿಕಾಫಿ ಕುಡ್ದ್, ಮನೆಗೆ ಹೋಗಿ ಮೂರ್ತಕ್ಕೆ ಬಂದವೆ. ಮೂರ್ತ ಮಂಟಪನ ಬಾರಿ ಲಾಯಕ್ಕಾಗಿ ಸಿಂಗಾರ ಮಾಡಿದ್ದವೆ. ಇದ್ ಈಗ ಬಾರಿ ಪೈಪೋಟಿಲಿ ನಡ್ದ್‌ದೆ. ಮೊದುಮಕ್ಕ ಅವ್ಕಕ್ಕಿಂತಾ ದೊಡ್ಡದಾದ ಕುರ್ಚಿಲಿ, ಗೊರ್‍ಗ್‌ಪಿಳ್ಳೆಗಳ್ಗಂಗೆ ಕುದ್ದ ಕಂಡಿದ್ದವೆ ನಮ್ಮ ಸಂಸ್ಕೃತಿನ ಉಡಿಗೆ ಕಾಣದೆ, ಈಗಿನ ಕೋಟು, ಪ್ಯಾಂಟ ಟೈ, ಆಗಿ ಮೊದುವಣ ಕುದ್ದಿದ್ದರೆ ಮೊದುವಳಿಗಿತ್ತಿ ತುಟಿಗೆ ಅರ್ಧ ಇಂಚ್ ಲಿಪ್‌ಸ್ಟಿಕ್ ಮೆತ್ತಿ ಹೊರಲಾರದ ಐದರಿಂದ ಹತ್ತು ಸಾ ರೂಪಾಯಿ ಧಾರೆ ಸೀರೆ ಉಟ್ಟು ಕುದ್ದಿದ್ದವೆ. ಇಬ್ಬರೂ ಗಳಿಗೆಗೊವೆ ಬಾರಿ ಕುಸಿಲಿ ಮಾತಾಡ್ಕಿಂಡ್ ನೆಂಟ್ರ್‌ನ ಪರಿಚಯಿಸಿಕಂಡ ಹಣಕಟ್ಟ್‌ಕೆ ಬರುವವರ್‍ನ ಕುದ್ದಲ್ಲಿಂದಲೇ ಷೂ ಚಪ್ಪಲಿ ಬಿಚ್ಚು ಕಷ್ಟಬ್ಯಾಡತ್ತೇಳಿ ಕೈ ಸನ್ನೆ ಮಾಡುತ್ತಿದ್ದವೆ. ಇವುಕೆ ಹಣ ಮೊದ ಯಾರ್ ಬೇಕಾರೆ ಕಟ್ಟಕ್. ಷೂ ಚಪ್ಪಲಿ ಬಿಚ್ಚುದ್ ಬ್ಯಾಡತ್ತೇಳ ಯಾಕೆ ತೇಳ್‌ರೆ, ತಾವೇ ಅರ್ಧ ಅಡಿ ಹೀಲ್ ಷೂ ಚಪ್ಪಲಿ ಹಾಕಂಡ ಕುದ್ದಿದ್ದವೆ ! ಬಂದ ಜನಕ್ಕೂ ಇದ್ ಒಳ್ಳೆದೆ. ಯಾಕೆ, ಬೇಗ ಹೋ. ಹನ್ನೊಂದು ಗಂಟೆಗೆ ಊಟಕ್ಕೆ ಕುದ್ದುಕಣಕ್. ಮೂರ್ತಲಿ ಬೇಕಾದವರ ಕೈ ಹಿಡ್ಕಂಡ್ ಪೊಟೋ ತೆಗ್ಸದು ಬ್ಯಾರೆ. ಮೂರ್ತ ಆಗಿ ಊಟಕ ಒಟ್ಟಿಗೆ ಕುದ್ದ್‌ಕ್ಕಂಡ್ ಗೂಡೆ ಹೈದನ ಬಾಯಿಗೆ, ಹೈದ ಗೂಡೆ ಬಾಯಿಗೆ ಊಟ ಕೊಡುವ ಹೇಸಿಗೆ ಆಟನ ನೋಡ್‌ಕೆ ಆದಷ್ಟ ಹೇಸಿಗೆಟ್ಟ ಜನ. ಎಲ್ಲಾ ಆಗಿ ಮೂರು ಗಂಟೆಗೆ ಹೆಣ್ಣ್ ಇಳ್ಸ್‌ಕ ಪಟ್ಟೆ, ವೀಳ್ಯ ರೆಡಿಮಾಡಿ, ಕೊಡ್‌ಕೆ ಸುರ್ ಮಾಡ್‌ಕನೆ, ಗೂಡೆನ ಕಣ್ಣ್‌ಲಿ ನೀರ್ ಬಂದರೂ ನೆಗಾಡಿಕ್ಕಂಡ್ ಇರ್‌ದು ಒಂದು ವಿಪರ್ಯಾಸ ಹೆಣ್ಣ್‌ಗಂಡ್ ವಹಿಸುದು ಕೇವಲ ಎರಡ್ ನಿಮಿಷಲಿ ಆಗೋತು. ಒವ್ಮೆ ಹೆಣ್ಣ್ ಇಳ್ದ್ ಹೋಗಿ ಸ್ವಲ್ಪ ದೂರಲಿ ಕುದ್ದ್, ಪುನಃ ತುಪ್ಪದಗಟ್ಲೆ ಮೊಗ್‌ಚ್‌ಕೆ ವಾಪಾಸ್. ಮತ್ತೆ ಸಮಾಜಂದ ಮದುವೆ ಮಾಡವು ಚಾರ್ಜ್ ಕೊಟ್ಟಾಕ್ಕನ ಸಾಯಂಕಾಲ ಆದೆ. ಮತ್ತೆ ಹೆಣ್ಣ ಕರ್‌ಕಂಡ್ ಮನೆ ಹತ್ತ್‌ಕ್ಕನ ಕತ್ತಲೆ. ಮತ್ತೆ ಮನೆವು ಊರವು ದನ ಕೊಡ್‌ಕೆ ಹೊತ್ತಾತ್‌ತ್ತೇಳಿ ಹೋದರೆ, ಇವರ ನಾಗೋಳಿ ಶಾಸ್ತ್ರ ಮಾಡವು ಯಾರ್ ! ಬಾಕಿದ್ದವು ಕ್‌ಳ್ಳ್‌ನ ಸುಸ್ತ್‌ಲಿ ಬ್ಯಾಗ ಮಲ್‌ಗ್‌ಕೆ ಆತ್. ಉಳ್ದವು ಅಂದ್ರೆ ಸಾಯಲಿತ್ತೇಳಿ ಬ್ಯಾಗ ಬ್ಯಾಗ ಮಲ್ಗುವ ಏರ್ಪಾಡಾದೆ.

ಈ ರೀತ್ಲಿ ನಮ್ಮ ಮೊದುವೆ ಜಂಬರ ಸಾಮಾನ್ಯವಾಗಿ ನಡೀತಾ ಉಟ್ಟುತ್ತೇಳ್ದ್ ಎಲ್ಲವುಕೆ ಗೊತ್ತುಟು. ಇನ್ನೂ ಕೆಲವು ಮೊದುವೆಗ ಬಾರಿ ವಿಚಿತ್ರ ರೀತಿಲಿ ನಡ್ದ್‌ದೆ. ಈಗ ನಮ್ಮಲ್ಲಿ ಪ್ರತಿಷ್ಠೆಗೆ ಮತ್ತೆ ಕ್‌ಳ್ಳ್‌ಗೆ ಪ್ರಧಾನವಾಗಿ ಪೈಪೋಟಿ ನಡೆಯುತ್ತ್‌ಟ್ಟ್. ಇದ್‌ಕೆ ಏನ್ ಕಾರಣ?

ಇದ್ನ್ ತಡೆಗೆಟ್ಟ್‌ದು ಹೆಂಗೆ? ಇದರ ಬಗ್ಗೆ ಚಿಂತನೆ ಮಾಡವು ಯಾರ್? ಹಿಂಗೆ ಬರೀ ಪ್ರಶ್ನೆಗ ಮೂಡಿ ಬಂದವೆ. ನಮ್ಮ ಸಂಸ್ಕೃತಿನ ಪ್ರತೀಕ ತೇಳ್ದ್ ನಮ್ಮ ಉಡಿಗೆಗೆ ಯಾವ ಮರ್ಯಾದಿ ಬೆಲೆ ಇಲದಿದ್ದ್ ಗೌಡರ್‌ಗಳ ಮೊದುವೆತ್ತೇಳ್ದ್ ಗೊತ್ತಾದುಲೆ. ಈ ಎಲ್ಲಾ ಆಡಂಬರನ ಮಾಡ್ದು ಆದರೆ ಇದರೊಟ್ಟಿಗೆ ನಮ್ಮ ಸಂಸ್ಕೃತಿನ ಚಾಚೂ ತಪ್ಪದೆ ಅವುಸರಿಸಿಕ್‌ಂಡ್ ಮಾಡ್‌ರೆ ನಮ್ಮ ಜಂಬರಕ್ಕೆ ಎಂತ ಮೆರ್‌ಗ್ ಕೊಟ್ಟಿದೆ. ಆದ್ರುಂದ ಈಗಿನ ನಮ್ಮ ಮೊದುವೆಗಳಲಿ ನಮ್ಮ ಸಂಸ್ಕೃತಿಗಳಿಗೆ ಹಿಂಗೆ ಅಪಚಾರ ಆದರೆ, ಮುಂದೆ ನಮ್ಮ ಪೀಳಿಗೆಗಳಿಗೆ ನಿಜವಾದ ಸಂಸ್ಕೃತಿಯಾವುದ್ ತೇಳ್‌ದು ಗೊತ್ತಾಕುಲೆ. ಶಾಸ್ತ್ರೋಕ್ತವಾಗಿ ಪದ್ಧತಿ ಪ್ರಕಾರ, ಹಿರಿಯರ ಆಶೀರ್ವಾದಗಳೊಟ್ಟಿಗೆ, ಪ್ರತಿಹಂತದ

10 ನೇ ಪುಟಕ್ಕೆ



# ರೆಭಾಷೆಯೆಂಬ ಕನ್ನಡದ್ದೊಂದು ರೂಪ

ಕರ್ನಾಟಕದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ, ಪುತ್ತೂರು ುತ್ತು ಬೆಳ್ತಂಗಡಿ ತಾಲೂಕುಗಳಲ್ಲಿ, ಕೇರಳದ ಕಾಸರಗೋಡು ಮತ್ತು ಡಗು ಜಿಲ್ಲೆಯಲ್ಲಿ ನೆಲೆಗೊಂಡಿರುವ ಅರೆಭಾಷೆಗೌಡರು ಮೂಲತಃ ಗ ಹಾಸನ ಜಿಲ್ಲೆಯ ವ್ಯಾಪ್ತಿಗೊಳಪಟ್ಟಿರುವ ಐಗೂರು ಸೀಮೆಯ ವಾಸಿಗಳಾಗಿದ್ದರು. ಇವರು ಕ್ರಮೇಣ ಕೆಲವು ಕಾರಣಗಳಿಂದಾಗಿ ೊಸ ನೆಲೆಗಳನ್ನರಸುತ್ತಾ ಮೇಲೆ ಉಲ್ಲೇಖಿಸಿರುವ ಸ್ಥಳಗಳಲ್ಲಿ ಳವೂರಿದರೆಂದು ಹಲವು ಆಧಾರಗಳಿಂದ ಸಿದ್ಧವಾಗಿದೆ. ಇವರಲ್ಲಿ ಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ಮತ್ತು ಬೆಳ್ತಂಗಡಿ ತಾಲೂಕುಗಳಲ್ಲಿ ಲಸಿದ ಗೌಡರು ತುಳು ಭಾಷೆಯನ್ನು ತಮ್ಮ ಮನೆಮಾತಾಗಿ ್ವೀಕರಿಸಿದ್ದರೂ ತಮ್ಮ ಮೂಲ ನೆಲೆಯಲ್ಲಿ ಕನ್ನಡಿಗರಾಗಿದ್ದರೆಂದು ರ್ಥಾರವಾಗಿ ಹೇಳಬಹುದು. ಉಳಿದಂತೆ ಸುಳ್ಯ ತಾಲೂಕಿನ ಹೆಚ್ಚಿನ ಗೌಡರು ಮತ್ತು ಕೊಡಗಿನ ಗೌಡರು ಅರೆಗನ್ನಡ ಅಥವಾ ರೆಭಾಷೆಯನ್ನು ಮಾತನಾಡುವರು.

ಗೌರೀಶ ಕಾಯ್ಕಿಣಿಯವರು ಹೇಳುವಂತೆ ಕನ್ನಡದಲ್ಲಿ ೆಳುವೊಲದ ಕನ್ನಡ, ಕರಾವಳಿಯ ಕನ್ನಡ, ಮೈಸೂರು ಕನ್ನಡ, ಹೈದ್ರಾಬಾದ್ ಕನ್ನಡ, ಹೈಗರ ಕನ್ನಡ, ಹಾಲಕ್ಕಿ ಗೌಡರ ಕನ್ನಡ, ಾಡವರ ಕನ್ನಡ ಇತ್ಯಾದಿ ರೂಪಗಳಿವೆ. ಇವುಗಳೊಂದಿಗೆ ಅರೆಭಾಷೆಯನ್ನೂ ಡು ಕನ್ನಡದ್ದೊಂದು ರೂಪವೆಂದು ಪರಿಗಣಿಸಬಹುದು.

ಕೆಲವರು ಅರೆಭಾಷೆಯನ್ನು ಗೌಡ ಕನ್ನಡವೆಂದು ಹೆಸರಿಸಿದ್ದಾರೆ. ಇದರಿಂದ ಈ ಭಾಷೆ ಗೌಡರಲ್ಲಿ ಯಾವ ಪಂಗಡದವರು ಬಳಸುವ ಭಾಷೆಯೆಂದು ಸ್ಪಷ್ಟೀಕರಣ ನೀಡಬೇಕಾಗುತ್ತದೆ. ಕರ್ನಾಟಕದ ಒಕ್ಕಲಿಗರಲ್ಲಿ ಹಲವಾರು ಪಂಗಡಗಳಿವೆಯಾದರೂ ಸರ್ವರೂ ಕನ್ನಡವನ್ನೇ ಮಾತನಾಡುತ್ತಾರೆ. ಅರೆಭಾಷೆ, ಒಕ್ಕಲಿಗರು ಮತ್ತು ಹಾಲಕ್ಕಿ ಗೌಡರು ಬಳಸುವ ನುಡಿಯಲ್ಲ. ಒಕ್ಕಲಿಗರ ಕನ್ನಡಕ್ಕೂ ನಾವು ಅರೆಭಾಷಿಕರು ಮಾತನಾಡುವ ಭಾಷೆಗೂ ಸಾಕಷ್ಟು ಭಿನ್ನತೆ ಇದೆ. ಹಾಗಾದರೆ ನಾವಾಡುವ ನುಡಿಗೆ ಅರೆಗನ್ನಡ, ಅರೆಭಾಷೆಗಳೆಂಬ ಹೆಸರು ಎಷ್ಟು ಸೂಕ್ತವೆಂದು ಪರ್ಯಾಲೋಚಿಸೋಣ.

ಅರೆಗನ್ನಡ, ಅರೆಭಾಷೆಗಳಲ್ಲಿರುವ 'ಅರೆ'ಎಂಬ ಪದದ ಅರ್ಥ ವೈವಿಧ್ಯಮಯವಾಗಿದೆ. ಇದಕ್ಕೆ ಅರ್ಧಭಾಗ, ಬಂಡೆ, ಬೇಸಿಗೆ, ರುಬ್ಬು, ನುರಿ, ಆರ್ಯರಿಗೆ ಸಂಬಂಧಿಸಿದ ಇತ್ಯಾದಿ ಅರ್ಥಗಳಿವೆ.

ಅರೆಭಾಷೆಯ ಮೂಲದ ಬಗ್ಗೆ ಇದಮಿತ್ಥಂ ಎಂದು ಹೇಳಲು ಸಾಕಷ್ಟು ಆಧಾರಗಳಿಲ್ಲ. ಆದ್ದರಿಂದ ಕೆಲವೊಂದು ಊಹಾಪೋಹಗಳಿಗೆ ಎಡೆ ಕೊಡಬೇಕಾಗುತ್ತದೆ. ಅವುಗಳಲ್ಲಿ ಮೂರು ಸಂಭವನೀಯತೆಗಳೆಂದರೆ.

೧. ಐಗೂರು ಸೀಮೆಯಲ್ಲಿದ್ದಾಗ ನಮ್ಮ ಪೂರ್ವಿಕರ ಭಾಷೆ ಗ್ರಾಮ್ಯ ಕನ್ನಡವಾಗಿದ್ದಿರಬೇಕು. ಅವರ ಹೊಸ ನೆಲೆಗಳಲ್ಲಿ ಅನ್ಯ ಪಂಗಡದವರು ಇದನ್ನು ಐಗೂರು ಭಾಷೆ ಎಂದು ಹೆಸರಿಸಿರಬೇಕು. ಐಗೂರು ಭಾಷೆಯೆಂಬುದು ಸವೆದು, ಸವೆದು ಅರೆಭಾಷೆಯೆಂಬ ರೂಪವನ್ನು ಹೊಂದಿರಬೇಕು.

೨. ನಮ್ಮ ಪಂಗಡದವರು ಮಾತನಾಡುವ ಕನ್ನಡದ ಈ ರೂಪವನ್ನು ಅರೆಗನ್ನಡವೆಂದು ಕರೆಯಲಾಗುತ್ತಿತ್ತು. ಅರೆಗನ್ನಡ ಭಾಷೆ ಎಂಬ ಉಕ್ತಿಯಿಂದ ಕ್ರಮೇಣ ಕನ್ನಡವೆಂಬ ಪದವನ್ನು ಕೈಬಿಟ್ಟಿರಬೇಕು. ಹೀಗೆ ಅರೆಗನ್ನಡವೇ ಅರೆಭಾಷೆಯೆಂಬ ಹೆಸರಿಗೆ ಎಡೆ ಮಾಡಿಕೊಟ್ಟಿರಬಹುದು.

೩. ಶಂ. ಬಾ. ಜೋಶಿಯವರು 'ಅರೆ' ಎಂಬುದು 'ಆರೆ' ಶಬ್ದದ ರೂಪಾಂತರವೆನ್ನುವರು. ಕನ್ನಡಿಗರು ಮರಾಠಿಗೆ **'ಆರಿಯ' ಭಾಷೆ** ಅಥವಾ **'ಆರೆ' ಭಾಷೆ** ಎನ್ನುವುದು ವಾಡಿಕೆಯಾಗಿತ್ತು. ತಮಿಳು ಪ್ರಾಚೀನ ಸಾಹಿತ್ಯದಲ್ಲೂ 'ಆರಿಯರ್' ಎಂಬ ಉಲ್ಲೇಖಗಳು ದೊರೆಯುತ್ತವೆ. 'ಆರಿಯ' (ಆರೆ) ಎಂಬುದು ಆರ್ಯ ಶಬ್ದದ ತದ್ಭವ. ಮರಾಠಿಯು ಬಂಗಾಳಿ, ಗುಜರಾತಿ, ಕೊಂಕಣಿಗಳಂತೆ ಆರ್ಯರ ಭಾಷೆಗಳು. ಸಂಸ್ಕೃತ ಮತ್ತು ಪ್ರಾಕೃತಗಳಿಂದ ಹುಟ್ಟಿದ ಭಾಷೆ.

ದ್ರಾವಿಡ ಭಾಷೆಗಳಲ್ಲಿ ಒಂದಾದ ಕನ್ನಡದೊಂದು ರೂಪವಾದ ನಮ್ಮ ಭಾಷೆಯು ದಕ್ಷಿಣದ ಇತರ ದ್ರಾವಿಡ ಭಾಷೆಗಳಾದ ತಮಿಳು, ತೆಲುಗು, ಮಲಯಾಳಂ, ತುಳು ಮತ್ತು ಕೊಡವ ಭಾಷೆಗಳಿಗಿಂತ ಇಂಡೋ-ಆರ್ಯನ್ ಭಾಷೆಗಳಿಂದ ಹೆಚ್ಚು ಪ್ರಭಾವಿತವಾಗಿರಬೇಕು. ಆದ್ದರಿಂದ ಇದನ್ನು ಅರೆಭಾಷೆಯೆಂದು ಹೆಸರಿಸಿರಬಹುದು. ಈ ಬಗ್ಗೆ ಭಾಷಾ ಶಾಸ್ತ್ರಜ್ಞರು ಹೆಚ್ಚಿಗೆ ಬೆಳಕು ಚೆಲ್ಲಬೇಕು.

**ಅರೆಭಾಷೆಯ ವೈಶಿಷ್ಟ್ಯ :** ಕನ್ನಡಭಾಷೆ ಕಾಲಕಾಲಕ್ಕೆ ಬದಲಾಗುತ್ತಾ ಹಳೆಗನ್ನಡ, ನಡುಗನ್ನಡ, ಹೊಸಗನ್ನಡ ಇತ್ಯಾದಿ ರೂಪಗಳನ್ನು ಪಡೆದುಕೊಂಡಿದೆ. ಹೊಸಗನ್ನಡದಲ್ಲಿ ಹಳೆಗನ್ನಡ ಮತ್ತು ನಡುಗನ್ನಡದ ರೂಪಗಳು ಕಣ್ಮರೆಯಾಗಿದೆ. ಅರೆಭಾಷೆಯಲ್ಲಿ ಹಳೆಗನ್ನಡ, ನಡುಗನ್ನಡ ಮತ್ತು ಹೊಸಗನ್ನಡ ಈ ಮೂರು ರೂಪಗಳ ದರ್ಶನವಾಗುತ್ತವೆ. ಉದಾಹರಣೆಗಾಗಿ 'ಗಡ' ಅರ್ಥಾತ್ 'ಅಂತೆ' ಅರೆಭಾಷೆಯಲ್ಲಿ ಉಳಿದುಕೊಂಡು ಬಂದಿದೆ. ಕನ್ನಡದಲ್ಲಿ ಕೆಲವು 'ಸಬಿಂದು' ಪದಗಳು 'ಅಬಿಂದು' ಪದಗಳಾಗಿವೆ. ಅರೆಭಾಷೆಯಲ್ಲಿ ಮಾತ್ರ ಸಬಿಂದುವಾಗಿಯೆ ಬಳಕೆಯಲ್ಲಿವೆ. ಉದಾಹರಣೆಗಾಗಿ :

| | |
|---|---|
| ಅಡಂಗು - ಅಡಗು | ಜಿನುಂಗು - ಜಿನುಗು |
| ಅಳಂಬೆ - ಅಳಬೆ | ಜಿಗುಂಟು -ಜಿಗುಟು |

ಕನ್ನಡದ ಕೆಲವು ಪದಗಳಲ್ಲಿ 'ಳ'ಕಾರ 'ಣ'ಕಾರವಾಗಿವೆ. ಆದರೆ ಅರೆಭಾಷೆಯಲ್ಲಿ ಈ ಬದಲಾವಣೆ ಚಾಲ್ತಿಯಲ್ಲಿಲ್ಲ. ಉದಾಹರಣೆಗಾಗಿ :

| | | |
|---|---|---|
| ಅಳಂಬೆ -ಅಣಬೆ | ಕಳ-ಕಣ | ಗಿಳಿ-ಗಿಣಿ |
| ಗಾಳ-ಗಾಣ | ನೊಳ-ನೊಣ | |

**ಆಧಾರ ಗ್ರಂಥಗಳು**

೧. ನೊಳಂಬ ಇತಿಹಾಸದರ್ಶನ : ಸಂಪಾದಕರು : ಕೆ. ಆರ್. ಬಸವರಾಜು.

೨. ಗೌಡ ಸಾರಸ್ವತ ಸಮಾಜದ ಕೀರ್ತಿ ಶಿಖರಗಳು : ಶಾಲಿನಿಪ್ರಭು

೩. ಕೊಂಕಣಿ ಭಾಷೆ ಸಾಹಿತ್ಯ : ಸಂಪಾದಕರು : ಮುರಳೀಧರ ಉಪಾಧ್ಯ ಹಿರಿಯಡಕ

೪. ಕನ್ನಡದ ನೆಲೆ - ಶಂ. ಭಾ. ಜೋಶಿ.

**ಲೇಖನ : ಕುಲ್ಲಚನ ಕಾರ್ಯಪ್ಪ**

**ಕುಂಬಳದಾಳು ಗ್ರಾಮ**

# ಪತ್ರ ವಿಭಾಗ :



ಅಭಿನಂದನೆ

ಮಾನ್ಯರೆ,

ತಮ್ಮ ಜುಲೈ ತಿಂಗಳ 15-31ರ ಪಾಕ್ಷಿಕ ಪತ್ರಿಕೆಯಲ್ಲಿ ಪ್ರಕಟವಾದ ಶ್ರೀ ಯಾಲದಾಳು ಕೇಶವಾನಂದ ಚಂದನ್‌ನೊಟ್ಟಿಗೆ ಶ್ರೀ ಬೈತಡ್ಕ ಬೆಳ್ಯಪ್ಪನವು ಹಂಗೂ ಗುಡ್ಡೆಮನೆ ರಮೇಶನವು ಮಾಡ್ದ ಮಾತ್‌ಕತೆ ಓದಿ ಕುಷಿ ಆತ್. ಲಾಯಕ್ಕಾಗಿ ಮಾಡ್ಯೊಳೊ ಈ ರೀತಿ ಮಾಡ್ದ ಮಾತ್‌ಕತೆಗಳಂದ ನಮ್ಮ ಜನಕೆ ಅದರ್ಲೂ ಯವ್ವನಸ್ಥರಿಗೆ ಅವರ ಮಕ್ಕಳ ಜೀವನನ ರೂಪಿಸಿಕೆ ಶ್ರೀ ಕೇಶವಾನಂದ ದಂಪತಿಗ ತಮ್ಮ ಮಂಙ್ಙನ ವಿಷಯಲಿ ಅವನ ಜೀವನದ ರೂಪಿಸಿಕೆ ತೋರಿಸಿ ಕೊಟ್ಟ ದಾರಿ ಹೆಂಗೆ ನಮ್ಮ ಮಕ್ಕಳಿಗೆ ಸರಿಯಾದ ದಾರಿ ತೋರಿಸಿರೆ ಆದೆ ತೇಳ್ದರ್ನ. ಬ್ಯಾರೆವುಕೂ ತೋರಿಸಿ ಕೊಟ್ಟಂಗೆ ಆತ್. ಚಂದನ್ ನೊಟ್ಟಿಗೆ ಮಾತ್‌ಕತೆ ನಡ್ಸ್‌ಕಾಕನ ಅವನ ಅಪ್ಪನ ಅವ್ವನೂ ಸೇರಿಸಿ ಕಂಡ್ ಮಾತ್‌ಕತೆ ಮಾಡ್ದ್ ಬೇರೆ ಮಕ್ಕಳ ಅಪ್ಪ ಅಮ್ಮಂಗಗಳಿಗೆ ಶ್ರೀ ಕೇಶವಾನಂದ ದಂಪತಿಗಳ ಪ್ರಯತ್ನ ಒಂದು ದಾರಿ ದೀಪ ಆದತ್ತೇಳ್ದರ್ಲಿ ಯಾವ ಸಂಶಯ ಇಲ್ಲೆ. ಚಂದನ್‌ನ ಶ್ರಮ ಹಂಗೂ ಶ್ರೀ ಕೇಶವಾನಂದನವರ ಮಾರ್ಗದರ್ಶನ ಬೇರೆವುಕ್ಕೂ ದಾರಿದೀಪ ಆಗಲಿ ಚಂದನ್‌ನಂತಹವರ ದೇಶಪ್ರೇಮ ಬೇರೆ ಹೈದ, ಗೂಡೆಗಳಿಗೂ ಸ್ಫೂರ್ತಿ ಬರಲಿಂತೇಳಿ ಹಾರೈಸಿನೆ.

ಪ್ರೊ. ಪೂಜಾರಿ ಮೊಣ್ಣಪ್ಪ, ಬೆಂಗಳೂರು





## 7th Death Anniversary

**Sri Ketoli Aiyappa Somanna**
Expired on 20-8-1992

Rememberd with Love & Respect

**From : Wife, Children and Brother**
**Mysor**

### 1998-99ರ ಸಾಲಿನ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ 60% ಕ್ಕಿಂತ ಹೆಚ್ಚು ಅಂಕ ಗಳಿಸಿದ ಗೌಡ ಪ್ರತಿಭೆಗಳು

| | ಗರಿಷ್ಠ | ಗಳಿಸಿದ್ದು | % |
|---|---|---|---|
| **ಹೇಮಲತಾ** D/o ಬೊಳುಗಲ್ಲು ಶಿವರಾಮಗೌಡ, ಬೆಂಗಳೂರು – 17 | 625 | 502 | 80.32 |
| **ಕೌಶಿಕ್** S/o ಯಂ. ಪಿ. ರಾಮೇಗೌಡ, ಪೊನ್ನಂಪೇಟೆ. | 625 | 574 | 91.84 |

### 1998-99ರ ಸಾಲಿನ IIನೇ ಪಿ. ಯು. ಸಿ. ಪರೀಕ್ಷೆಯಲ್ಲಿ 60% ಕ್ಕಿಂತ ಹೆಚ್ಚು ಅಂಕ ಗಳಿಸಿದ ಗೌಡ ಪ್ರತಿಭೆಗಳು

| | | | |
|---|---|---|---|
| **ವಿನುತಾ** D/o ಚೊಂಡೀರ ಮೊಣ್ಣಪ್ಪ, ಮಂಡ್ಯ | 600 | 441 | 73.5 |
| **ಸವಿತಾ** D/o ಬೊಳುಗಲ್ಲು ಶಿವರಾಮಗೌಡ, ಬೆಂಗಳೂರು – 17 | 600 | 418 | 69.66 |

## ೌಡ ಸಂಸ್ಕೃತಿ : (ಹಿಂದಿನ ಸಂಚಿಕೆಯಿಂದ......)

ಭಾರತ ದೇಶದಲ್ಲಿರುವುದೇ ಹಲವಾರು ಸಂಸ್ಕೃತಿಗಳ ಮಿಶ್ರಣ. ನರಲ್ಲಿ ಕೊಡಗು ಅರೆಭಾಷಿಕರ ಸಂಸ್ಕೃತಿಯು ಒಂದು ವಿಶಿಷ್ಟ ುದುದು. ನಡುಗನ್ನಡದ ಪಳೆಯುಳಿಕೆಯೇ ಅರೆಗನ್ನಡ ಅಥವಾ ರೆಭಾಷೆಯೆಂಬುದು ಹೆಚ್ಚಿನ ಜನರ ಅಭಿಪ್ರಾಯವಾಗಿದೆ. ಇವರ ಸ್ಕೃತಿ, ಆಚಾರ, ವಿಚಾರವನ್ನು ಹುಟ್ಟಿನಿಂದ ಹಿಡಿದು ಸಾಯುವ ರಕ ನಾವುಗಳು ನಮ್ಮ ಕೊಡಗು ಸಂಗಾತಿ ಪತ್ರಿಕೆಯಲ್ಲಿ ಹಂತ ಂತವಾಗಿ ದಿನಾಂಕ 1-4-1997 ರಿಂದ 31-8-1999ರ ತನಕ 58 ಚಿಕೆಗಳಲ್ಲಿ ಪ್ರಕಟಿಸಿದ್ದೇವೆ. ಮೊದಲ ಬಾರಿಗೆ ಸುಮಾರು ಗೌಡರ ರಿತ್ರೆಯನ್ನು ಬೆಂಗಳೂರಿನ ಕೊಡಗು ಮತ್ತು ದ.ಕನ್ನಡ ಗೌಡ ಮಾಜವು 1968ರ ಹಿಂದೆಯೆ ಪ್ರಕಟಿಸಿತ್ತು. ಕೊಡಗು ಗೌಡ ದ್ಯಾಸಂಘವು ಗೌಡ ಸಂಸ್ಕೃತಿ ಎಂಬ ಪುಸ್ತಕವನ್ನು 1985ರಲ್ಲಿ ್ರಕಟಿಸಿತ್ತು. ಇದರ ಪ್ರಯೋಜನವನ್ನು ಹಲವಾರು ಮಂದಿ ಅಂದು ಡೆದಿರಬಹುದು. ಅದರ ಪೂರ್ಣ ಪ್ರಯೋಜನವನ್ನು ನಮ್ಮ ನಾಂಗದ ಸರ್ವರು, ಪ್ರತಿಯೊಬ್ಬರು ಪಡೆಯುವಂತೆ ಮತ್ತು ಈಗಿನ ವ ಯುವಕ - ಯುವತಿಯರಿಗೆ ಸಂಸ್ಕೃತಿ ಆಚಾರ, ವಿಚಾರ, ಭಾಷೆ, ಂಪ್ರದಾಯದ ಬಗ್ಗೆ ಪ್ರಜ್ಞೆ ಮೂಡಿಸುವ ನಿಟ್ಟಿನಲ್ಲಿ ಪತ್ರಿಕೆಯಲ್ಲಿ ್ರಕಟಿಸಿದ್ದೇವೆ. ಇದರ ಪ್ರಯೋಜನವನ್ನು ಯುವ ಜನತೆ ಪಡೆಯುವಂತಾದರೆ ನಾವೇ ಧನ್ಯರು. "ಗೌಡ ಸಂಸ್ಕೃತಿ" ಪುಸ್ತಕದ ಪ್ರಕಾಶಕರಾದ ಕೊಡಗು ಗೌಡ ವಿದ್ಯಾ ಸಂಘ, ಮಡಿಕೇರಿ ಮತ್ತು ಅವರ ಕಾರ್ಯಕಾರಿ ಮಂಡಳಿಯವರಿಗೆ ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆಯ ಪರವಾಗಿ ಹೃತ್ಪೂರ್ವಕ ಧನ್ಯವಾದಗಳು. ಈ ಸಂಚಿಕೆಯಲ್ಲಿ ಗೌಡ ಸಂಸ್ಕೃತಿ ಮುಗಿಯಲಿದೆ - ಜೈ ಗೌಡ ಬಾಂಧವರೆ.

**- ಸಂಪಾದಕಿ**

**ಪಿಂಡ ಹಾಕುವ ಬಗ್ಗೆ ಸ್ವಾರಸ್ಯವಾದ ಕಥೆಯೊಂದಿಗೆ**

ಹಿಂದಿನ ಕಾಲದಲ್ಲಿ ಒಬ್ಬ ರಾಜಕುಮಾರನು ಬೇಟೆಗಾಗಿ ಒಂದು ದೊಡ್ಡ ಘೋರಾರಣ್ಯಕ್ಕೆ ಹೋದನಂತೆ. ಅಲ್ಲಿ ಒಬ್ಬ ದಾರಿ ತಪ್ಪಿ ಬಹುದೂರ ಹೋದುದರಿಂದ ದಣಿವು ಆರಿಸಲು ಒಂದು ಮರದ ನೆರಳಿನಲ್ಲಿ ಮಲಗಿ ನಿದ್ರೆ ಮಾಡಿದನಂತೆ, ಇವನಿಗೆ ಎಚ್ಚರವಾಗುವಷ್ಟರಲ್ಲಿ ರಾತ್ರಿ ಎಷ್ಟೋ ಸಮಯ ಕಳೆದಿತ್ತು. ಆ ಹೊತ್ತಿನಲ್ಲಿ ಆ ಅರಣ್ಯದಲ್ಲಿ ವಾಸಿಸುತ್ತಿದ ಒಂದು ರಣಭೂತವು ಆರ್ಭಟಿಸುತ್ತಾ ಇವನ ಸಮೀಪಕ್ಕೆ ಬಂದು ರಾಜಕುಮಾರನನ್ನು ತಿನ್ನಲು ಪ್ರಯತ್ನಿಸುವ ಸಮಯದಲ್ಲಿ ರಾಜಕುಮಾರನಿಗೆ ಎಚ್ಚರವಾಗಿ ಆ ಭಯಂಕರ ರೂಪದ ರಣ ಭೂತವನ್ನು ನೋಡಿದನು. ಉದ್ದವಾದ ಕೋರೆ ಹಲ್ಲುಗಳು, ನೀಳವಾಗಿ ಬಿಟ್ಟ ಕೇಶ ರಾಶಿಗಳು, ಗಡ್ಡ ಮೀಸೆಗಳು, ಹೊರ ಚಾಚಿದ್ದ ನೀಳವಾದ ನಾಲಿಗೆ, ಬೆಂಕಿಯ ಕೆಂಡದಂತೆ ಉರಿಯುತ್ತಿದ್ದ ಕಣ್ಣುಗಳು ಇರುವುದನ್ನು ಕಂಡು ರಾಜಕುಮಾರನು ಭೀತಿ ಪಡದೆ ಆ ರಣ ಭೂತವನ್ನು ಕುರಿತು ನೀನು ಯಾರೆಂದು ಪ್ರಶ್ನಿಸಿದನು. ಅದಕ್ಕೆ ರಣಭೂತವು ಎರಡು ಕೈಗಳನ್ನು ಜೋಡಿಸಿ ನಮಸ್ಕರಿಸಿ ಕಣ್ಣೀರು ಸುರಿಸುತ್ತಾ ತನ್ನ ಕಥೆಯನ್ನು ಹೇಳ ತೊಡಗಿತು. ನಾನು ಒಂದಾನೊಂದು ಕಾಲದಲ್ಲಿ ನಿನ್ನಂತೆಯೇ ಒಬ್ಬ ರಾಜಕುಮಾರನಾಗಿದ್ದೆನು. ನಾನು ಕೂಡ ಬೇಟೆಗಾಗಿ ಬಂದವನು. ಕಾಡಿನಲ್ಲಿ ಆಕಸ್ಮಿಕವಾಗಿ ಮರಣ ಹೊಂದಿದೆನು. ನಾನು ಮರಣ ಹೊಂದಿದ್ದು ನನ್ನ ಸಂಬಂಧಿಕರಿಗೆ ತಿಳಿಯಲೇ ಇಲ್ಲ. ಎಲ್ಲಿಯೋ ದೇಶ ಸಂಚಾರಕ್ಕಾಗಿ ಹೋಗಿರಬಹುದೆಂದು ಭಾವಿಸಿದರು. ಆ ಕಾರಣದಿಂದಾಗಿ ಸತ್ತವರಿಗೆ ಮಾಡಬೇಕಾದ ಉತ್ತರ ಕ್ರಿಯೆಯನ್ನು ಮಾಡಲಿಲ್ಲ. ಆದುದರಿಂದ ನನಗೆ ಮೋಕ್ಷದ ಗತಿ ಸಿಕ್ಕದೆ ಈ ರಣ ಭೂತದ ಜನ್ಮ ಪ್ರಾಪ್ತವಾಯಿತು. ಎಷ್ಟೋ ಸಮಯಗಳಿಂದ ಈ ಘೋರ ಅರಣ್ಯದಲ್ಲಿ ಅಲೆಯುತ್ತಿರುವೆನು.

ನನ್ನಂತೆ ಬಂದ ರಾಜಕುಮಾರನಾದ ನಿನ್ನ ಬೇಟಿಯಾಯಿತು. ನನಗೆ ಈ ರಣಭೂತದ ಜನ್ಮ ಹೋಗಿ ಮೋಕ್ಷ ಸಿಗಬೇಕಾದರೆ ನಿನ್ನಿಂದ ಸಾಧ್ಯವೆಂದು ಹೇಳಿತು.

ಒಡನೆಯೇ ರಾಜಕುಮಾರನು ಅದೇನೆಂದು ಹೇಳು. ಅಂತೆಯೇ ನಾನು ನಿನಗಾಗಿ ಮಾಡುವೆನೆಂದು ವಚನವಿತ್ತನು. ರಣಭೂತವು ಸತ್ತವರಿಗಾಗಿ ಮಾಡುವ ಕ್ರಿಯೆಗಳನ್ನೆಲ್ಲಾ ಸವಿಸ್ತಾರವಾಗಿಹೇಳಿ, ಪುಣ್ಯ ಕ್ಷೇತ್ರದಲ್ಲಿ ಪಿಂಡ ಹಾಕುವ ಕ್ರಮವನ್ನು ವಿವರಿಸಿತು. ಅಂತೆಯೇ ಮಾಡುವುದಾಗಿ ರಾಜಕುಮಾರನು ರಣಭೂತಕ್ಕೆ ಮತ್ತೊಮ್ಮೆ ವಾಗ್ದಾನ ಮಾಡಿದನು. ರಣಭೂತವು ರಾಜಕುಮಾರನಿಗೆ ರಾಜಧಾನಿಗೆ ಹಿಂತಿರುಗುವುದಕ್ಕೆ ಮಾರ್ಗವನ್ನು ತೋರಿಸಿ ರಾಜಕುಮಾರನನ್ನು ಬೀಳ್ಕೊಟ್ಟಿತು.

ರಾಜಕುಮಾರನು ಅರಮನೆಗೆ ಹಿಂತಿರುಗಿದ ಕೂಡಲೇ ಕಾರ್ಯ ಪ್ರವರ್ತನಾಗಿ ಒಂದು ತಿಂಗಳು ಗಡ್ಡ ಬಿಟ್ಟು ದೀಕ್ಷೆಗೆ ನಿಂತು ಉತ್ತರ ಕ್ರಿಯೆಗಳನ್ನು ಮಾಡಿ ರಣಭೂತವು ಹೇಳಿದಂತೆ ಪುಣ್ಯ ಕ್ಷೇತ್ರದಲ್ಲಿ ಪಿಂಡ ಹಾಕಿದನು. ಆ ಸಮಯದಿಂದಲೇ ರಣಭೂತದ ಜನ್ಮ ಅಂತ್ಯ ಗೊಂಡು, ಮೋಕ್ಷ ಸಿಕ್ಕಿ ಸ್ವರ್ಗ ಪ್ರಾಪ್ತವಾಯಿತು ಎನ್ನುವ ಕಥೆಯಿದೆ.

ಹಿರಿಯರ ನಡವಳಿಕೆ ಪ್ರಕಾರ ಮೂರು ವರ್ಷದಿಂದ ಹನ್ನೆರಡು ವರ್ಷಗಳವರೆಗೆ ಮಾತಪಿತೃರಿಗೆ ತೀರ್ಥ ಕ್ಷೇತ್ರದಲ್ಲಿ ಪಿಂಡ ಹಾಕುವರು. ಹಾಕಿಸಿಕೊಂಡ ಮೃತನ ಆತ್ಮಕ್ಕೆ ಶಾಂತಿ ಸಿಕ್ಕಿ ಮೋಕ್ಷ ಹೊಂದಿ ಸ್ವರ್ಗ ಸುಖವನ್ನು ಅನುಭವಿಸುವನು ಎಂಬ ನಂಬಿಕೆ.

**ದೀಪಾವಳಿಯಲ್ಲಿ ಅವುಲು ಹಾಕುವುದು (ಅವಲಕ್ಕಿ ಬಡಿಸುವುದು)**

ಸತ್ತವನಿಗೆ ಮನೆಯವರು ಅದೇ ವರ್ಷ ದೀಪಾವಳಿಯ ಸಮಯದಲ್ಲಿ ಅಮವಾಸ್ಯೆ ದಿವಸ ಹೆಣ್ಣಿಗೂ, ಅದರ ಮಾರನೆಯ ದಿವಸ ಗಂಡಿಗೂ ಅವಲು ಬಡಿಸುವ ಕ್ರಮವಿದೆ. ಅಂದು ಮುಂಜಾನೆ ಸಾಧಾರಣ ನಾಲ್ಕು ಗಂಟೆ ಸಮಯದಲ್ಲಿ ಅವಲಕ್ಕಿ, ಬೆಲ್ಲ, ಬಾಳೆ ಹಣ್ಣು, ತುಪ್ಪ, ತೆಂಗಿನ ಕಾಯಿ ತುರಿಯಿಂದ ಬಾಳೆ ಎಲೆಯ ಮೇಲೆ ಎಡೆ ಹಾಕುವರು. ಕೊಡಗಿನಲ್ಲಿ ಎಲ್ಲಾ ಮನೆಗಳಲ್ಲಿ ದೀಪಾವಳಿಯನ್ನು ಆಚರಿಸುವುದಿಲ್ಲ. ಸತ್ತವರ ಮನೆಗಳಲ್ಲಿ ಮಾತ್ರ ದೀಪಾವಳಿ ಆಚರಿಸುತ್ತಾರೆ. ಆದರೆ ಗೌಡ ಜನಾಂಗದವರು ಮಿಥುನ ಮಾಸ (ಕಾರ್ ತಿಂಗ) ದಲ್ಲಿ ಸಾಧಾರಣವಾಗಿ ಎಲ್ಲಾ ಕುಟುಂಬದಲ್ಲಿಯೂ ಕಾರ್ ತಿಂಗಳ ಹರಿಕೆ ಎಂದು ಕೊಲೆಗಳಿಗೆ ಹರಿಕೆ ಒಪ್ಪಿಸುತ್ತಾರೆ.

**ಬಾಲ್ಯ ಶವ ಸಂಸ್ಕಾರ :** ಗೌಡರು ಶವ ಸಂಸ್ಕಾರದಲ್ಲಿ ಪ್ರೌಢಾವಸ್ಥೆಗೆ ಮಕ್ಕಳು ಬರದೇ ಬಾಲ್ಯದಲ್ಲಿ ಮೃತರಾದರೆ ಅವರಿಗೆ ಆಗುವ



ಸಂಸ್ಕಾರವು ಇತರರಿಗಿಂತ ಭಿನ್ನವಾದುದು. ಅದನ್ನು ಸಂಸ್ಕಾರ ಎಂದು ಹೇಳುವುದಕ್ಕಿಂತಲೂ ದಪನ ಎಂದೇ ಹೆಚ್ಚಾಗಿ ಹೇಳುವುದು. ಅವರನ್ನು ಸುಡುವಂತಿಲ್ಲ. ಮಣ್ಣು ಮಾಡುವ ಕ್ರಮ ನಡೆಯುವುದರಿಂದ ಅದನ್ನು ದಪನ ಎಂದು ಹೇಳಲಾಗಿದೆ. ಗೌಡ ಜನಾಂಗದ ಸಂಪ್ರದಾಯದಲ್ಲಿ ನಡೆದು ಬರುವುದು ಮತ್ತು ಪ್ರಸ್ತುತ ಮುಂದುವರಿದುಕೊಂಡು ಬರುತ್ತಿದೆ. ಮಗುವೊಂದು ಕಾರಣಾಂತರದಿಂದ ಮೃತ ಪಟ್ಟರೆ ಸಮೀಪದ ನೆರೆಯವರನ್ನು ಬರಮಾಡಿಕೊಂಡು, ಮೃತ ಮಗುವನ್ನು ಸ್ನಾನಮಾಡಿಸಿ, ಮಡಿ ಬಟ್ಟೆಯನ್ನು ತೊಡಿಸಿ, ಬಿಳಿ ಬಟ್ಟೆಯನ್ನು ಹೊದಿಸಿ ಶವದ ಬಾಯಿಗೆ ನೀರು ಕೊಟ್ಟು (ಹಾಲು ಎಳೆನೀರು ಮಿಶ್ರಣವನ್ನು ತುಳಸಿ ಕೊಡಿಯಿಂದ ಕೊಡುವುದು) ಮಗುವನ್ನು ದಪನ ಮಾಡುವುದಕ್ಕೆ ನಿಶ್ಚಯಿಸಿದ ಸ್ಥಳದಲ್ಲಿ, ಮಗುವಿನ ಉದ್ದಳತೆಗೆ ಸಾಕಷ್ಟು ಗುಂಡಿ ತೆಗೆದು ಅಲ್ಲಿಗೆ ತೋಳಿನಿಂದಲೆ ಎತ್ತಿಕೊಂಡು ಹೋಗುವುದು ಮತ್ತು ಗುಂಡಿಯಲ್ಲಿಟ್ಟು ಸ್ವಲ್ಪ ಹಾಲು ಹುಯ್ದು ದಪನ ಕಾರ್ಯ ಮುಗಿಸುವುದು. ಅಕ್ಕಿ ಭತ್ತ ಇಡುವುದಾಗಲಿ, ಚಟ್ಟ ಕಟ್ಟುವುದಾಗಲಿ, ಪ್ರಾಪ್ತ ವಯಸ್ಸಿಗೆ ಬರುವವರೆಗೆ ಇರುವುದಿಲ್ಲ. ನಂತರ ಎಲ್ಲರೂ ಸ್ನಾನ ಮಾಡಿ ಬರುವುದು. ಐದು ಅಥವಾ ಏಳನೇಯ ದಿನದಂದು ಹಾಲು ಅನ್ನವನ್ನು ಮಗುವಿನ ದೂಪೆಯ ಹತ್ತಿರವಿಟ್ಟು ಸರಳಿ ಸೊಪ್ಪನ್ನು ಕುತ್ತಿ ಸ್ನಾನ ಮಾಡಿ ಬರುವುದು. ದೇವಸ್ಥಾನದಿಂದ ಪುಣ್ಯ ನೀರನ್ನು ತರಿಸಿ (ಪುಣ್ಯಾರ್ಚನೆ) ಮೈಗೂ ಮನೆಗೂ ಸಿಂಪಡಿಸಿಕೊಳ್ಳುವುದು. ಇದರಲ್ಲಿ ಕ್ಷೌರಿಕ, ಮಡಿವಾಳ, ಓಲಗದವರ ಸಹಕಾರವನ್ನು ಈ ಸಂಪ್ರದಾಯದಲ್ಲಿ ಸೇರಿಸಿಕೊಳ್ಳುವುದಿಲ್ಲ. ಇಲ್ಲಿಗೆ ಬಾಲ್ಯ ಶವ ಸಂಸ್ಕಾರ ಮುಗಿಯುತ್ತದೆ.

**ಅವಿವಾಹಿತ ಶವ ಸಂಸ್ಕಾರ :** ಮೃತ ಪಟ್ಟವರು ಅವಿವಾಹಿತರಾಗಿದ್ದು ವಿವಾಹ ಪ್ರಾಯ ಕಳೆದು ವೃದ್ಧಾಪ್ಯವಿದ್ದು ಮೃತರಾದರೆ ಎಲ್ಲಾ ಸಂಪ್ರದಾಯ ಶಾಸ್ತ್ರಗಳನ್ನು ಶವ ಸಂಸ್ಕಾರ ರಿತ್ಯ ಮಾಡುವುದು. ಆದರೆ ಚಟ್ಟ ಕಟ್ಟಿ ಹೊರುವಾಗ ಒಂದೇ ದಂಡದಲ್ಲಿ (ಒಂಟಿ ಬಡಿಗೆ) ಚಾಪೆಯ ಮೇಲೆ ಎಲೆಯನ್ನು ಮಗುಚಿ ಇಟ್ಟು ಅದರ ಮೇಲೆ ಶವವನ್ನು ಇಟ್ಟು ಒಂದೇ ಬಿದಿರಿನ ಬಡಿಗೆಗೆ ಬಿಗಿದು ಹೊರುವುದು.

ಮೃತ ಪಟ್ಟವರು ಅವಿವಾಹಿತರಾಗಿದ್ದು ವಿವಾಹ ಪ್ರಾಯಕ್ಕೆ ಬಂದಿದ್ದು ಮೃತ ಪಟ್ಟರೆ ಅವರಿಗೆ ಆಗುವ ಶಾಸ್ತ್ರಗಳು ಬೇರೆಯೇ ಆಗುವುದು. ಅವರನ್ನು ಕೂಡ ಒಂಟಿ ಬಡಿಗೆಯಿಂದ ಹೊರಬೇಕು. ಆದರೆ ನಂತರದ ಸಮಯದಲ್ಲಿ ಅವರಿಂದ ತೊಂದರೆಗಳು ಕಾಣಿಸಿಕೊಳ್ಳುವುದು ಎಂದು ಅವರಿಗೆ ಕೆಲವು ಕಡೆಗಳಲ್ಲಿ ಆ ದಿನ ಮದುವೆಯ ಏರ್ಪಾಡು ಮಾಡುವರು. ಮೃತ ಪಟ್ಟವರು ಗಂಡಾದರೆ ಬಾಳೆಯ ಕಂದಿಗೆ ನೂಲು ದಾರದಿಂದ ತಾಳಿಯೊಂದು ಮಾಡಿ ಮೃತನ ಕೈಯಿಂದ ಬಾಳೆಯ ಕಂದಿಗೆ ತಾಳಿ ಕಟ್ಟಿಸಿದಂತೆ ಮಾಡಿಸಿ ಚಟ್ಟಕಟ್ಟಿ ಹೊತ್ತು ಸುಡುವುದು ಕ್ರಮ. ಮೃತಳು ಹೆಣ್ಣಾದಲ್ಲಿ ಹುಲ್ಲಿನಿಂದ ಗಂಡಿನಾಕೃತಿಯ ಬೊಂಬೆಯೊಂದನ್ನು ಮಾಡಿ ಬೊಂಬೆಯ ಕೈಯಿಂದ ಹೆಣ್ಣಿಗೆ ತಾಳಿ ಕಟ್ಟಿಸಿದಂತೆ ಮಾಡಿ ಹೊತ್ತು ಸುಡುವರು. ಉಳಿದೆಲ್ಲಾ ಶಾಸ್ತ್ರಗಳು ಇತರರಂತೆಯೇ ನಡೆಯುವುದು.

ಮುಗಿಯಿತು.

# ಕುಲಗುರು ಅಲ್ಲ ಕುಲದೇವರು ವೆಂಕಟರಮಣ

ಜನಾಂಗದಲ್ಲಿ ಹಲವಾರು ಯಾರನ್ನಾದರು ಹರಸುವ ಕುಲಗುರು ವೆಂಕಟರಮಣ ಒಳ್ಳೆಯದು ಮಾಡಲಿ ಅಥವಾ ಕೃಪೆ ಇ- ಎಂಬುದಾಗಿ ಹೇಳುವುದಾಗಲೀ ಅಥವಾ ಬರೆಯುವುದಾಗಲಿ ಮಾಡುತ್ತಾ ಆ ರೀತಿ ಹೇಳುವುದು ಸರಿಯಾದ ಒಕ್ಕಣೆಯಲ್ಲ. ಕಾರಣವೇನೆಂ ಶ್ರೀ ವೆಂಕಟರಮಣಸ್ವಾಮಿ ಗೌಡರ ಕುಲ (ಮನೆ) ದೇವರು.

ನಮ್ಮ ಗುರು - ಶೃಂಗೇರಿ ಜಗದ್ಗುರು ಅಥವಾ ಆದಿಚುಂಚನಗಿರಿ ಜಗದ್ಗುರುಗಳು. ಕುಲಗುರುವಿಗೂ ಮತ್ತು ಕುಲದೇವ ವ್ಯತ್ಯಾಸವಿದೆ ಎಂಬ ವಿಚಾರ ತಿಳಿಸುವುದಕ್ಕೆ ಆಶಿಸುತ್ತೇನೆ.

ಪ್ರೊ. ಪೂಜಾರಿ ಮೊಣ್ಣಪ್ಪ
ಬೆಂಗಳೂ

---

### ಮಹಾತ್ಮ ಗಾಂಧೀಜಿಯವರ ಹೊನ್ನುಡಿಗಳು

1. ತೃಪ್ತಿ ಇರುವುದು ಪ್ರಯತ್ನದಲ್ಲಿ ಸಿದ್ಧಿಯಲ್ಲಿಲ್ಲ ಪೂರ್ಣ ಪ್ರಯತ್ನವೇ ಪೂರ್ಣವಿಜಯ
2. ಮನುಷ್ಯನ ಬುದ್ಧಿಯ ಪ್ರಗತಿಗೆ ಮಿತಿ ಇದೆ ಆದರೆ ಹೃದಯ ಗುಣಗಳ ಬೆಳವಣಿಗೆಗೆ ಯಾವ ಎಲ್ಲೆಯೂ ಇಲ್ಲ
3. ಶಕ್ತಿ ದೈಹಿಕ ಬಲದಿಂದ ಬರುವುದಿಲ್ಲ ಅದು ಬರುವುದು ಅದಮ್ಯವಾದ ಸಂಕಲ್ಪದಿಂದ
4. ಪ್ರಾರ್ಥನೆಯಲ್ಲಿ ಹೃದಯವಿಲ್ಲದ ಶಬ್ದಗಳು ಇರುವುದಕ್ಕಿಂ ಶಬ್ದಗಳೇ ಇಲ್ಲದ ಹೃದಯವಿರುವುದು ಉತ್ತಮ.

ಸಂಗ್ರಹ : ಮಳ್ಳನ ಎಸ್. ವಸಂತ್(ವಿನು
ಮಕ್ಕಂದೂರು

---

6 ನೇ ಪುಟದಿಂದ

ಆಚರಣೆಲಿ ಪವಿತ್ರತೆನ ಕಾಪಾಡಿಕ್‌ಂಡ್ ನಡ್ದ್ ಮೊದುವೆ, ಆ- ದಂಪತಿಗ ಆಯುರಾರೋಗ್ಯ ಹೊಂದಿ ಉತ್ತೋರತ್ತರ ಅಭಿವೃದ್ಧಿಯಿಂದ ಜೀವನಲಿ ಶಾಂತಿ ಮತ್ತೆ ನೆಮ್ಮದಿನ ಪಡ್ದವೆತ್ತೇಳ್ಳ್ ನಂಬಿಕೆ ನಿಜ. ಯಾಕೆತ್ತೇಳ್‌ರೆ ಇದ್‌ಕೆ ಈಗ ಬೇಕಾದಷ್ಟ್ ಉದಾಹರಣೆಗೆ ಸಿಕ್ಕಿವೆ. ಹಿರಿಯರ್‌ನ ಹೀಯಾಳ್ಸಿ, ಗೌರವ ಕೊಡದೆ, ಸಂಸ್ಕೃತಿಗೆ ಅಪಚಾರ ಎಸ್‌ಗಿರೆ, ಅದರ ಕರ್ಮನ ಮದುವೆಯಾದ ಮ್ಯಾಲೆ ನಾವು ಬೀಡಕ್ಕಾದೆತ್ತೇಳ್ದನ ಗ್ಯಾನ ಮಾಡಕೂ. ಆದ್ರಿಂದ ಇಂದ್‌ನ ಸಮಾಜಕ್ಕೆ ಅಂಟಿದ ಈ ದುಶ್ಚಟ ಮತ್ತೆ ಅನಾಚಾರದ ಕ್ರಮಗಳ್ನ ಹೊಡ್ಡೋದೋಡಿಸಿಕೆ, ನಾವೆಲ್ಲವು ಪ್ರಾಮಾಣಿಕದ ಪ್ರಯತ್ನ ಮಾಡಿ, ನಮ್ಮ ಶ್ರೀಮಂತ ಸಂಸ್ಕೃತಿನ ಉಳ್ಸಿಕೆ ಸರ್ವ ದಿಕ್ಕ್‌ಲಿ ಒಗ್ಗೂಡಿ ನಾವು ಮತ್ತೆ ನಮ್ಮವುತ್ತೇಳಿ ತೋರ್‍ಸಿಕಂಡ್ ಸಮಾಜನ ಬೆಳ್ಸಿ ಕೊಡ್‌ಗ್‌ಲಿ ನಾವೂ ವಳೊತ್ತೇಳ್ದನ್ನು ಪ್ರಪಂಚಕ್ಕೆ ಬಹಿರಂಗ ಪಡ್ಸ್‌ವ ಮಹಾತ್ಕಾರ್ಯನ ಮಾಡ್‌ಕೆ ನಮ್ಮನ ತೊಡ್‌ಗಿಸಿಕಣೊ !

ಲೇಖನ : ಗುಡ್ಡೆಮನೆ ರಮೇಶ್
ಮಡಿಕೇರಿ



# ,ಕೃತಿದತ್ತ ಕೊಡುಗೆ "ಕೊಡಗಿನ ಪುಷ್ಪಗಿರಿ ಬೆಟ್ಟ" : ನನ್ನ ಪ್ರವಾಸದ ಅನುಭವ

ಸನ್ 1998ನೇ ನವೆಂಬರ್ 28 ಮತ್ತು 29ರ ದಿನಗಳು, ,ಮ್ಮ ಬಾಳೆಂಬ ಪುಸ್ತಕದ ಅವಿಸ್ಮರಣೀಯ ಪುಟಗಳು. ಆ ಪ್ರಕೃತಿಯ ಡುವೆ ನಾವು ಪಡೆದಂತಹ ದಿವ್ಯಾನುಭವ, ಬಾಳೆಂಬ ಬುತ್ತಿಯ ,ಯೂಟ.

ಅಂದು ಕಾವೇರಿ ಕಾಲೇಜು ಗೋಣಿಕೊಪ್ಪಲುವಿನ ರಾಷ್ಟ್ರೀಯ ವಾ ಯೋಜನೆಯ ಘಟಕವು ಸೋಮವಾರಪೇಟೆಯಲ್ಲಿನ ಪುಷ್ಪಗಿರಿ ಟ್ಟಕ್ಕೆ ಚಾರಣವನ್ನೇರ್ಪಡಿಸಿತ್ತು. ನಾನು ಪ್ರಥಮ ಬಿ. ಕಾಂ. ದ್ಯಾರ್ಥಿನಿ ರಾ. ಸೇ. ಯೊ. ಯ ಸ್ವಯಂಕರ್ತೆಯೂ ಹೌದು. ನಾವು ಲೇಜಿನಿಂದ ಬೆಳಗ್ಗಿನ ಜಾವ ಆರು ಗಂಟೆಗೆ ಪ್ರಯಾಣವನ್ನ ರಂಭಿಸಿದೆವು.

ಅಂತೂ ಶಿಬಿರಾರ್ಥಿಗಳನ್ನೂ ಮತ್ತು ಶಿಬಿರಾಧಿಕಾರಿಗಳನ್ನು ೊತ್ತಂತಹ ಬಸ್ಸು ಸೋಮವಾರ ಪೇಟೆಯನ್ನು ತಲುಪಿದಾಗ ಹತ್ತು ಂಟೆಯಾಗಿತ್ತು. ನಮ್ಮ ಬಸ್ಸು ದೇವಸ್ಥಾನದ ಬಳಿ ಬರಲು ಸಾಧ್ಯವಾದುದರಿಂದ ಅದು ಬಹಳಷ್ಟು ದೂರದಲ್ಲಿಯೆ ನಿಂತಿತು. ವು ಅಲ್ಲಿಂದ ದೇವಸ್ಥಾನದ ಬಳಿ ತಲುಪಿದಾಗ, ಇಡೀ ಪುಷ್ಪಗಿರಿಯನ್ನೇ ತ್ತಿದರೂ ಆಗದಂತಹ ಬಳಲಿಕೆ ಉಂಟಾಗಿ ಬಿಟ್ಟಿತು. ನಮ್ಮ ಡಿಗೆಯ ತಯಾರಿ ಜೋರಾಗಿಯೆ ನಡೆಯಿತು. ಸೋ. ಪೇಟೆಯ ಂದು ಹೋಟೆಲಿನಲ್ಲಿ ನಮ್ಮ ಹೊಟ್ಟೆಯೊಳಗೋಗಿದ್ದ ದೋಸೆ, ಾಫಿ, ಎಲ್ಲೊ ಮಾಯವಾಗಿತ್ತು. ನಮ್ಮ ಹೊಟ್ಟೆ ತಾಳ ಾಕಲಾರಂಭಿಸಿತು. ಅಂತೂ ನಮ್ಮ ಹೊಟ್ಟೆಗೆ ಕವಳ ಬಿದ್ದಾಗ ಮೂರು ಗಂಟೆ ದಾಟಿ ಬಿಟ್ಟಿತು.

ನಮ್ಮೆಲ್ಲರ ಊಟವಾದ ನಂತರ ನಮ್ಮೊಂದಿಗೆ ಗೈಡ್‌ಗಳಾಗಿ ಂದಿದ್ದ ಅಲ್ಲಿನ ನಿವಾಸಿಯಿಬ್ಬರು ನಮ್ಮನ್ನೊಂದು ಸುಂದರವಾದ ಳಕ್ಕೆ ಕರೆದೊಯ್ದರು. ಜಿಗಣೆ ಕಾಣದ ಊರಿನವರಾದ ನಮಗೆ, ಈ ಬೆಟ್ಟದಲ್ಲಿ ಹಾರುವ ಜಿಗಣೆಯೂ ಇದೆ ಎಂದಾಗ ಕಂಗಾಲಾದೆವು. ದರೆ ಈ ಸಮಯದಲ್ಲಿ ಅದಿರುವುದಿಲ್ಲವೆಂದು ಅವರು ಹೇಳಿದಾಗ ಮ್ಮದಿಯ ಉಸಿರು ಬಿಟ್ಟೆವು. ನಾವು ಹೋದಂತ ಆ ಸುಂದರ ಪ್ರದೇಶ ಶಾಲವಾಗಿದ್ದು, ಅನೇಕ ಕಲ್ಲುಗಳಿಂದ ನಿರ್ಮಿತವಾದಂತಹ ಚಿಕ್ಕ ಪುಟ್ಟ ದೇವಸ್ಥಾನ, ಗುಹೆ, ಒಲೆ, ಕೋಟೆ, ಕೊತ್ತಳ ಚಕ್ರವ್ಯೂಹದ ಮಾದರಿಯನ್ನು ಹೊಂದಿದ್ದವು. ಇವೆಲ್ಲಾ ಮಾನವ ನಿರ್ಮಿತವಾಗಿತ್ತು.

ನಾವು ಆ ಬಂಡೆ ಹಾಸುಗಳ ಮೇಲೆ ಕುಳಿತು ನಮಗೆ ಅಭಿಮುಖವಾದ ಶಿಖರದ ನಡುವೆ ಸೂರ್ಯ ಕಣ್ಮರೆಯಾಗುವುದನ್ನು ಮೈಮರೆತು ನೋಡುತ್ತಿದ್ದೇವು. ಆ ಸಂಧ್ಯಾವೇಳೆ ಹಕ್ಕಿಗಳು ತಮ್ಮ ಗೂಡು ಸೇರುವ ತವಕದಿಂದ ಹಾರುತ್ತಿದ್ದದಂತೂ ನಯನ ಮನೋಹರವಾಗಿತ್ತು. ಆ ಬೀಸುವ ತಂಗಾಳಿ ನಮ್ಮ ಬೇಗುದಿ ಮನಸ್ಸನ್ನು ತಂಪು ಮಾಡುತ್ತಿತ್ತು. ಶಿಬಿರಾಧಿಕಾರಿ ಎಚ್ಚರಿಸಿದಾಗ ಆ ಪ್ರಕೃತಿ ಮಾತೆಗೆ ಕೈ ಮುಗಿದು ಹಿಂತಿರುಗಿದೆವು.

ಅಂದು ರಾತ್ರಿ ಊಟ ಮುಗಿಸಿದ ನಂತರ ನಮ್ಮ ಶಿಬಿರಾಧಿಕಾರಿಯು ಶಿಬಿರಾರ್ಥಿಗಳನ್ನು ಹಲವು ಗುಂಪುಗಳಾಗಿ ವಿಂಗಡಿಸಿ, ಅದಕ್ಕೊಬ್ಬ ನಾಯಕರನ್ನು ಮಾಡಿ, ಅವರುಗಳಿಗೆ ಜವಬ್ದಾರಿಯನ್ನು ಹೊರಿಸಿದರು. ಪುಷ್ಪಗಿರಿಯ ಪ್ರಥಮ ರಾತ್ರಿಯನ್ನು ಕೊರೆಯುವ ಚಳಿಯ ನಡುವೆ ಕಳೆದೆವು. ಅಬ್ಬಬ್ಬಾ ಎಂದರೆ ಒಂದು ಎರಡು ಗಂಟೆ ನಾವು ಕಣ್ಮುಚ್ಚಿರ ಬಹುದಷ್ಟೆ !

ನಾವೆಲ್ಲಾ ಬೆಳ್ಳಂ ಬೆಳಗ್ಗೆನೆ ಎದ್ದು ಚಿತ್ರಾನ್ನವನ್ನು ತಯಾರಿಸಿ ಕೊಂಡು, ಲಗ್ಗೇಜನ್ನು ಬೆನ್ನ ಮೇಲೇರಿಸಿ ಕೊಂಡು, ಕಾಲುಗಳಿಗೆಲ್ಲಾ ನಿಂಬೆಹಣ್ಣನ್ನು ಜಿಗಣೆಯ ಭಯದಿಂದ ಸವರಿ, ಕೈಯ್ಯಲ್ಲೊಂದು ಊರುಗೋಲನ್ನು ಹಿಡಿದು ಹೊರಟೆವು. ನಮ್ಮೊಬ್ಬ ಸರ್ ಜಾಗಿಂಗ್ ಡ್ರೆಸ್ ಹಾಕಿ, ತಲೆಗೊಂದು ಪಟ್ಟಿಯನ್ನು ಕಟ್ಟಿ ಕೈಯ್ಯಲ್ಲೊಂದು ದೊಡ್ಡ ಕೋಲನ್ನು ಹಿಡಿದು ನಿಂತಿದ್ದನ್ನು ಕಂಡು ವಿದ್ಯಾರ್ಥಿನಿಯೊಬ್ಬಳು ತಮಾಷೆಯಾಗಿ "ಏನ್ಸಾರ್? ಕುರಿ ಕಾಯಲಿಕ್ಕೆ ಹೊರಟಂಗಿದೆ.." ಎಂದಾಗ ಅವರು 'ಹೌದು!.ಕಾಯ್ಬೇಕಲ್ಲಾ.... ಕುರಿಗಳನ್ನು" ಎಂದು ತಿರುಗುಬಾಣ ಎಸೆದು ನಮ್ಮನ್ನು ಕುರಿಗಳನ್ನಾಗಿ ಮಾಡಿದ್ದರು.

ಅಂತೂ ನಮ್ಮ ಪ್ರಯಾಣ ಸುರುವಾಯಿತು. ನಡೆದು ಸುಸ್ತಾಗಿ 'ಇನ್ನೆಷ್ಟು ದೂರ?' ಎಂದು ಗಳಿಗೆಗೊಮ್ಮೆ ಕೇಳುತ್ತಾ ಇನ್ನೂ ಅರ್ಧ ದಾರಿಯನ್ನು ಕ್ರಮಿಸಿಲ್ಲ ಎಂದಾಗ ಸುಸ್ತಾಗಿ ಬಿಡುತ್ತಿದ್ದೆವು. ಆದರೆ ಆ ಸುತ್ತಲಿನ ರಮಣೀಯತೆಯನ್ನು ಸವಿಯುವಾಗ ನಮ್ಮ ಸುಸ್ತೆಲ್ಲಾ ಹೊರಟು ಹೋಗುತ್ತಿತ್ತು. ಮರದ ತೂಗು ಸೇತುವೆಯನ್ನು ದಾಟಿ, ಏರು ಬಂಡೆಯನ್ನು ಹತ್ತಿ, ಅದರ ಮೇಲೆ ಕುಳಿತು ಬ್ರೆಡ್ ಜ್ಯಾಂ ತಿಂದು ವಿರಮಿಸಿಕೊಂಡು ಪುನಃ ಹತ್ತಲು ಸುರು ಮಾಡಿದೆವು.

ಬಂಡೆಗಳ ಏರು ಹಾದಿಯಲ್ಲಿ ಹತ್ತಿ, ಕೆಲವೊಮ್ಮೆ ಎಡವಿ ಬಿದ್ದು, ಪೊದೆಗಳಂತಿದ್ದ 4-5 ಅಡಿ ಎತ್ತರವಿದ್ದ ಆ ಗಿಡ ಗಂಟೆಗಳನ್ನು ಹಾದು ಕೊನೆಗೂ ಸಮುದ್ರಮಟ್ಟದಿಂದ ಸುಮಾರು ೭೦೦೦ ಅಡಿ ಎತ್ತರದ ಪುಷ್ಪಗಿರಿಯ ತುದಿಯನ್ನು ತಲುಪಿದೆವು. ಸಾಲು ಸಾಲು ಬೆಟ್ಟದ ಆ ಸುಂದರ ನೋಟದ ಪರಿಸರ ಕಂಡಾಗ ನಮಗಾದ ಸಂತೋಷ ಅಷ್ಟಿಷ್ಟಲ್ಲ.

ಆಗ ಕವಿಕುವೆಂಪುರವರ ಕವನದ ಸಾಲು ನೆನಪಲ್ಲಿ ಬರುತ್ತಿತ್ತು.

**ಸಹ್ಯಾದ್ರಿಯ ಗಿರಿ ಪಂಕ್ತಿಯ**
**ಕೊನೆಗಾಣದ ಲೀಲೆ**
**ಬಹು ಯೋಜನ ವಿಸ್ತೀರ್ಣದ**
**ವನರಾಶಿಯ ಮಾಲೆ**

ಆ ಪರ್ವತದ ಒಂದು ಬದಿಯಲ್ಲಿ ನಿಂತು ನಾವೆಲ್ಲಾ ಹೊಹೋ ಎಂದಾಗ ಪ್ರತಿಧ್ವನಿ ಬರುತ್ತಿತ್ತು. ಒಮ್ಮೆಗೆ ಕಿರುಚಿ ತಕ್ಷಣ ನಿಲ್ಲಿಸಿದಾಗ ಅತ್ತಲಿನ ಪರ್ವತಗಳಿಂದ ಬಂದ ಧ್ವನಿಯು ಅಲ್ಲಿ ಪ್ರೇತಗಳು ಕೇಕೆ ಹಾಕುತ್ತಿವೆಯೇನೊ ಎಂಬ ಭಾವನೆಯನ್ನು ತರಿಸುತ್ತಿತ್ತು.

ಅಲ್ಲಿಂದ ಇನ್ನೊಂದು ಬದಿ ಬಂಡೆಗಳ ಪ್ರದೇಶಕ್ಕೆ ಬಂದಾಗ ನಮಗೊಂದು ವಿಸ್ಮಯ ಕಾದಿತ್ತು ! ಆ ಪರ್ವತದ ತುತ್ತ ತುದಿಯಲ್ಲಿ ಬಂಡೆಗಳ ನಡುವೆ ನೀರು ನಿರಂತರವಾಗಿ ಚಿಕ್ಕತೊರೆಯ ರೂಪದಲ್ಲಿ ಹರಿಯುತ್ತಿತ್ತು. 'ಬೆಟ್ಟದ ಮೇಲೆ ಕಟ್ಟೆ ಕಟ್ಟಿ ಮರದ ಬುಡಕ್ಕೆ ನೀರನ್ನೆರೆವರಾರ್?' ಎಂಬ ಮಾತು ಆ ತಕ್ಷಣ ನೆನಪಿಗೆ ಬಂದಿತು. ದೇವರ ಮಹಿಮೆ ವರ್ಣಿಸಲಸದಳ ಇಲ್ಲಿ.

**12 ನೇ ಪುಟಕ್ಕೆ**

# ಕಾಫಿಯನ್ನು ಹೇಗೆ ಪತ್ತೆಹಚ್ಚಲಾಯಿತು ?



ಕಾಫಿ, ಉಲ್ಲಾಸದಾಯಕ ಪಾನೀಯ, ವಿಶ್ವಾದ್ಯಂತ ಜನರು ಕಾಫಿ ಸೇವಿಸುತ್ತಾರೆ. ಒಂದು ಕಪ್ ಕಾಫಿ ಕುಡಿದರೆ ಹೊಸ ಹುರುಪು ಬರುತ್ತದೆ. ಕಾಫಿಯಲ್ಲಿ ಕೆಫೀನ್ (Caffeine) ಎಂಬ ಪದಾರ್ಥ ಇರುತ್ತದೆ. ಅದು ಆಯಾಸವನ್ನು ಪರಿಹರಿಸುತ್ತದೆ. ದೇಹ ಮತ್ತು ಮನಸ್ಸುಗಳನ್ನು ಚುರುಕುಗೊಳಿಸುತ್ತದೆ.

ಕಾಫಿಯ ಶೋಧನೆಯ ಕಥೆ ತುಂಬ ಸ್ವಾರಸ್ಯಪೂರ್ಣ. ಅನೇಕ ಶತಮಾನಗಳ ಹಿಂದೆ ಅರೇಬಿಯಾದಲ್ಲಿ ಕಾಲ್ಡಿ ಎಂಬ ಒಬ್ಬ ಕುರುಬನಿದ್ದ. ಒಂದು ದಿನ, ಕೆಲವು ಆಡುಗಳು ಮತ್ತು ಕುರಿಗಳು ವಿಚಿತ್ರವಾಗಿ ವರ್ತಿಸುತ್ತಿದ್ದುದನ್ನು ಅವನು ಕಂಡ, ಅವು ಹಚ್ಚ ಹಸಿರು ಗಿಡದಲ್ಲಿ ಬಿಟ್ಟಿದ್ದ ಕೆಲವು ಕೆಂಪು ಹಣ್ಣುಗಳನ್ನು ತಿಂದು ಕುಣಿಯಲಾರಂಭಿಸಿದವು. ಹಾಗೂ ಚುರುಕಾಗಿ ಓಡತೊಡಗಿದವು. ಅವು ಮರಿಗಳ ಹಾಗೆ ಆಡುತ್ತಿದ್ದವು. ಇದನ್ನು ನೋಡಿ, ಆ ಕುರುಬನೂ ಆ ಹಣ್ಣುಗಳನ್ನು ತಿಂದ. ಅವನಿಗೂ ಹೊಸ ಉಲ್ಲಾಸ ಮೂಡಿತು. ತನ್ನ ಅನುಭವವನ್ನು ಕುರುಬ ಹತ್ತಿರದಲ್ಲೇ ಇದ್ದ ಬೌದ್ಧಮಂದಿರದ ಸನ್ಯಾಸಿಯೊಬ್ಬನಿಗೆ ವಿವರಿಸಿದ. ಸನ್ಯಾಸಿಯೂ ಆ ಹಣ್ಣು ತಿಂದು ನೋಡಿದ. ಅವನಿಗೂ ಅದೇ ಅನುಭವವಾಯಿತು. ಅನಂತರ ಆ ಸನ್ಯಾಸಿ, ಆ ಹಣ್ಣನ್ನು ಕಿತ್ತು, ಅವನ್ನು ಅರೆದು ನೀರಿನಲ್ಲಿ ಹಾಕಿದ. ಆ ಪೇಯವನ್ನು ಮಠದ ಇತರ ಭಿಕ್ಷುಗಳಿಗೂ ನೀಡಿದ. ಅದನ್ನು ಕುಡಿದ ಬಳಿಕ, ಅವರಲ್ಲಿ ಒಂದು ಹೊಸ ಚೇತನ ಮಿಂಚಿ ಹರಿದಂತಾಯಿತು. ಈ ಕೆಂಪುಹಣ್ಣು, ಕಾಫಿಗಿಡದ ಹಣ್ಣಾಗಿತ್ತು.

ಈ ಕಥೆ ಎಷ್ಟರಮಟ್ಟಿಗೆ ವಿಶ್ವಾಸಾರ್ಹವೆಂಬುದಕ್ಕೆ ಸರಿಯಾದ ದಾಖಲೆಗಳಿಲ್ಲ. ಆದರೆ ಕಾಫಿ ಕುಡಿಯುವ ಹವ್ಯಾಸ ಆರಂಭವಾಗಿದ್ದು, ಅರೇಬಿಯಾದಲ್ಲಿ ಎಂಬುದು ಮಾತ್ರ ಖಚಿತವಾಗಿದೆ. ಹದಿನೇಳನೇ ಶತಮಾನದಲ್ಲಿ ಕಾಫಿ ಸೇವನೆ ಬ್ರಿಟನ್ನಿಗೆ ಹಬ್ಬಿತು. 1650 ರಲ್ಲಿ ಆಕ್ಸ್‌ಫರ್ಡ್‌ನಲ್ಲಿ ಮೊಟ್ಟಮೊದಲು ಕಾಫಿ ಹೌಸ್ ಆರಂಭವಾಯಿತು. ಅನಂತರ ಕಾಫಿ ಇತರ ಅನೇಕ ದೇಶಗಳಲ್ಲೂ ತುಂಬ ಜನಪ್ರಿಯವಾಯಿತು.

ಸದಾ ಹಸಿರಾಗಿರುವ ಒಂದು ಗಿಡದ ಬೀಜಗಳಿಂದ ಕಾಫಿಯ
ಪಡೆಯಲಾಗುವುದು. ಸಾಮಾನ್ಯವಾಗಿ ಈ ಗಿಡ ಹದಿನೈದು ಅಡಿಗಳ
ಎತ್ತರವಿರುತ್ತದೆ. ಆದರೆ ಕಾಫಿಯನ್ನು ಬೆಳೆಯುವ ಕಸಬುದಾ
ಆ ಗಿಡವನ್ನು ಆರು ಅಡಿಗಳಿಗಿಂತ ಹೆಚ್ಚಾಗಿ ಬೆಳೆಯಲು ಅವ
ಕೊಡುವುದಿಲ್ಲ.

ಈ ಗಿಡಕ್ಕೆ ಮೂರರಿಂದ ನಾಲ್ಕು ವರ್ಷಗಳಾದಾಗ, ಅವುಗ
ಹೂವುಗಳು ಕಾಣಿಸಿಕೊಳ್ಳುತ್ತವೆ. ಕಾಫಿಗಿಡದ ಕಚ್ಚಾ ಹಣ್ಣಿನ ಬ
ಹಸಿರಾಗಿರುತ್ತದೆ. ಆರೇಳು ತಿಂಗಳ ನಂತರ ಈ ಹಣ್ಣು ಮಾಗುತ್ತ
ಆಗ ಅದರ ಬಣ್ಣ ಕೆಂಪಾಗುತ್ತದೆ. ಈ ಹಣ್ಣಿನ ಬೀಜಗಳನ್ನು ಹುರಿ
ಪುಡಿ ಮಾಡಲಾಗುತ್ತದೆ. ಈ ಪುಡಿ, ಪೇಟೆಯಲ್ಲಿ ಮಾರಾಟವಾಗುತ್ತ
ಕಾಫಿಯನ್ನು ಜನರು ನಾನಾ ವಿಧಾನಗಳಲ್ಲಿ ಕುಡಿಯುತ್ತಾರೆ. ಕೇ
ಜನರು, ಹಾಲು ಬೆರಸದೇ ಬರಿ ಕಾಫಿ ನೀರನ್ನೇ ಕುಡಿಯುತ್ತಾರೆ. ಇ
ಬ್ಲ್ಯಾಕ್ ಕಾಫಿ (Black Coffee) ಎನ್ನುತ್ತಾರೆ. ಆದರೆ ಕ
ಡಿಕಾಕ್ಷನ್‌ಗೆ ಹಾಲು ಮತ್ತು ಸಕ್ಕರೆ ಬೆರೆಸಿ, ತಯಾರಿಸುವ ಕಾಫಿ ಹೆ
ಜನಪ್ರಿಯ. ಅನೇಕ ಜನರು, ತಣ್ಣನೆ ಕಾಫಿ (Cold Coffee) ಯ
ಸಹ ಕುಡಿಯುತ್ತಾರೆ.

ಸಾಮಾನ್ಯವಾಗಿ ಒಂದು ಕಪ್ ಕಾಫಿಯಲ್ಲಿ ಸುಮಾರು 1
ಮಿಲಿ ಗ್ರಾಂ ನಷ್ಟು ಕೆಫೀನ್ ಇರುತ್ತದೆ. ಇದು ಬಹಳ ಉಲ್ಲ
ನೀಡುತ್ತದೆ. ಹಾಗೂ ದೇಹದಲ್ಲಿ ಹೊಸ ಹುರುಪು ಉಂಟಾಗುತ್ತ

---

## ನಿವೃತ್ತ ಸೈನಿಕರ ಮಕ್ಕಳಿಗೆ ವಿದ್ಯಾರ್ಥಿ ವೇತನ

ಮೈಸೂರು, ಮಂಡ್ಯ ಚಾಮರಾಜನಗರ ಜಿಲ್ಲೆಯಲ್ಲಿ ರಾಜ್ಯ
ಮೂಲನಿವಾಸಿ ಸೇನಾ ಪಿಂಚಣಿದಾರರ ಮಕ್ಕಳು/ಪಿಂಚಣಿ ಪಡೆಯ
ಬಿಡುಗಡೆ ಹೊಂದಿದ ಮಾಜಿ ಸೈನಿಕರ ಮಕ್ಕಳಿಗೆ ವಿದ್ಯಾರ್ಥಿ ವೇತ
ನೀಡಲಿದ್ದು, 1ರಿಂದ ಪದವಿ, ಡಿಪ್ಲೋಮಾವರೆಗೆ ಓದುತ್ತಿರುವವ
ಸೆಪ್ಟೆಂಬರ್ 15ರೊಳಗೆ ಉಪ ನಿರ್ದೇಶಕರು, ಸೈನಿಕ ಕಲ್ಯಾಣ ಹಾ
ಪುನರ್ವಸತಿ ಇಲಾಖೆ ಇವರಿಗೆ ಅರ್ಜಿ ಸಲ್ಲಿಸಬೇಕು.

---

**11 ನೇ ಪುಟದಿಂದ**

ಕೊನೆಗೆ ನಾವೆಲ್ಲಾ ಶಿಖರ ಅವರೋಹಣಕ್ಕೆ ಸುರು ಮಾಡಿದೆ
ಮಾರ್ಗದ ಒಂದೆಡೆ ಸನ್ ಪಾಯಿಂಟ್ ಸ್ಥಳದಲ್ಲಿ ಸ್ವಲ್ಪ ಹೊ
ಕುಳಿತು ವೀಕ್ಷಿಸಿ, ಪುನಃ ಇಳಿಯಲು ಆರಂಭಿಸಿ ಮನಸ್ಸಿಲ್ಲ
ಮನಸ್ಸಿನಿಂದ ಪರ್ವತದ ತಪ್ಪಲನ್ನು ತಲುಪಿದೆವು.

ದೇವಸ್ಥಾನದವರು ನೀಡಿದ ಊಟವನ್ನು ಮಾಡಿ, ಆವರಣವ
ಸ್ವಚ್ಛಗೊಳಿಸಿ [ಎಷ್ಟಾದರೂ ಎನ್. ಎಸ್. ಎಸ್. ಅಲ್ವೆ...?] ನವ
ಬಸ್ಸಿನ್ನತ್ತ ಪ್ರಯಣ ಹೊರಟಾಗ, ಸೂರ್ಯ ದಿಗಂತದಂಚಿನ
ಭೂಮಿಯ ಮುಖ ಸವರಿ ಕೆಂಪಗೆ ಮಾಡಿದ್ದನು. ಈ ಅನುಭವವನ
ಕೊಡಗಿನವರು ಸವಿಯಲೇಬೇಕಾಗಿರುವುದು ಅವಶ್ಯಕವೂ ಹೌದು
ಹೆಚ್ಚಿನವರಿಗೆ ಈ ಬಗ್ಗೆ ಇರುವ ತಿಳುವಳಿಕೆ ಸಾಲದೆಂದು ನ
ಅಭಿಪ್ರಾಯ.

**ನನ್ನ ಪ್ರವಾಸದ ಅನುಭವ : ಮೂಡಗದ್ದೆ ಕೃಪಾ ಈರಪ**




✦ ಕೌಂಡಿನ್ಯ

**ಧಾರವಾಹಿ -12**

ತಂಗಾಳಿ ಹಿತವಾಗಿ ಬೀಸುತ್ತಿದೆ !

ಅದು ದೇವಸ್ಥಾನದ ಪ್ರಾಂಗಾಣ !

ಕಲ್ಲು ಹಾಸಿನ ಮೇಲೆ ದೇವಸ್ಥಾನದ ಯುವಕ ಪೂಜಾರಿ ಮತ್ತು ರೇವತಿ ಎದುರು ಬದರಾಗಿ ಕುಳಿತುಕೊಂಡಿದ್ದಾರೆ.

ಪೂಜಾರಿ ಕತೆ ಹೇಳುತ್ತಿದ್ದಾನೆ.

ಎಡತೊರೆ ಮನೆತನದ ನಿಗೂಢ ಸಂಗತಿಗಳು !

ಅದರ ಸಾರಾಂಶ ಹೀಗಿದೆ !

ಹತ್ತು ವರ್ಷಗಳ ಹಿಂದೆ ಸಂಪಿಗೆ ಪುರದಲ್ಲಿ ಈ ಎಡತೊರೆ ಕುಟುಂಬದವರು ತೀರಾ ಬಡವರಾಗಿದ್ದರು.

ವೀರಭದ್ರ - ಮಂಜಯ್ಯ - ಪ್ರಸನ್ನ !

ಈ ಮೂವರು ಸಹೋದರರೊಂದಿಗೆ ಅಕ್ಕ ಆರುಂಧತಿ ಕಡು ಬಡತನದಲ್ಲಿ ಕೂಲಿ ಮಾಡಿ ಕೊಂಡು ಸಂಸಾರ ಮಾಡುತ್ತಿದ್ದರು.

ಅರುಂಧತಿಗೆ ಮದುವೆಯಾಗಿತ್ತು !

ಸಂಪಿಗೆ ಪುರದಿಂದ ಹತ್ತು ಮೈಲಿಗಳು ದೂರ ಇರುವ ಮಾಹಾಬಲಿ ಪುರಕ್ಕೆ ಕೂಲಿಯ ಕೆಲಸಕ್ಕೆ ಹೋಗುತ್ತಿದ್ದರು.

ಅವರೇ ಜಮೀನುದಾರ ರಂಗೇಗೌಡ !

ಏನಾಯಿತೋ..... ಕತ್ತಲಲ್ಲಿ ಅದೇನು ನಡೆಯಿತೋ ಗೊತ್ತಿಲ್ಲ. ಕೆಲವು ದಿನಗಳ ಕಾಲ ಎಡತೊರೆಯವರು ಊರಿನಿಂದಲೇ ಕಣ್ಮರೆ ಯಾಗಿದ್ದರು. ದಿಢೀರ್ ಅಂತ ಬಂದರು !

ಜಮೀನನ್ನು ಖರೀದಿಸಿದರು !

ಬಂಗಲೆಯನ್ನು ಕಟ್ಟಲು ಪ್ರಾರಂಭಿಸಿದರು. ಅದೇನು ಅಂತಿಂಥ ಬಂಗಲೆ ಅಲ್ಲ !

ಹಣವನ್ನು ನೀರಿನಂತೆ ಚೆಲ್ಲಿ ಕಡಿಮೆ ಸಮಯದಲ್ಲಿ ದೊಡ್ಡ ಬಂಗಲೆ ನಿರ್ಮಿಸಿದರು.

ಪರಮಾಶ್ಚರ್ಯಕರ ಬದಲಾವಣೆ !

ಈ ಮೂವರು ಸಹೋದರರ ಪೈಕಿ ವೀರಭದ್ರ, ಲಿಂಗಯ್ಯನಿಗೆ ಬುದ್ಧಿ ಭ್ರಮಣೆ ಯಾಗಿತ್ತು !

ಆರುಂಧತಿ ಚೆನ್ನಾಗಿಯೇ ಇದ್ದಳು !

ಆದರೆ ಅವಳ ಗಂಡ ಅರೆ ಹುಚ್ಚನಂತೆ ಬೀದಿ ಬೀದಿ ತಿರುಗಿ ಕೊಂಡಿದ್ದನು. ಈಗಲೂ ಅದೇ ಗೋಳು !

ಏನಾಗಿ ಹೋಯಿತು ಈ ಮೂವರಿಗೆ ?

ದಿಢೀರ್ ಅಂತ ನಿಗೂಢ ರೀತಿಯಲ್ಲಿ ಶ್ರೀಮಂತಿಕೆ ಬಂದಿತು. ಆದರೆ ಸಂಸಾರದ ಬಹುಮಂದಿಗೆ ಹುಚ್ಚು ಹಿಡಿದಿತ್ತು.

ಪ್ರಸನ್ನ ಕಿರಿಯವನು !

ಆದರೆ ಈಗ ಅವನೇ ಯಜಮಾನ !

ಶ್ರೀಮಂತಿಕೆಯನ್ನು ನಿಯಂತ್ರಿಸುತ್ತಾ. ತನ್ನ ರಕ್ತ ಸಂಬಂಧಿಗಳನ್ನು ಸ್ವಾರ್ಥಕ್ಕಾಗಿ ಬುಗುರಿಯಂತೆ ಆಡಿಸುತ್ತಿದ್ದಾನೆ.

ಹುಚ್ಚು ಹಿಡಿದಿರುವ ಅಣ್ಣಂದಿರು?

ಅರೆ ಹುಚ್ಚ ಅಕ್ಕನ ಗಂಡ !

ಈಗ ಸಮಸ್ತ ಆಸ್ತಿಯನ್ನು ಅನುಭವಿಸುತ್ತಿದ್ದಾನೆ. ಗೋಮುಖ ವ್ಯಾಘ್ರ ಪ್ರಸನ್ನ. ಇದೇ ಎಡತೊರೆಯ ಶ್ರೀಮಂತಿಕೆಯ ಕತೆ !

ಬಯಲಾಗದ ರಹಸ್ಯಗಳು !

ದಿಢೀರ್ ಅಂತ ಶ್ರೀಮಂತಿಕೆ ಹೇಗೆ ಬಂತು?

ಅವರೆಲ್ಲಾ ಹುಚ್ಚರಾಗಲು ಕಾರಣವೇನು?

ಮೀನಳ ಸಾವಿನ ರಹಸ್ಯ !

ಯುವಕ ಪೂಜಾರಿ ಇದನ್ನೆಲ್ಲಾ ವಿವರವಾಗಿ ತನ್ನ ಎದುರಿಗೆ ಕುಳಿತಿರುವ ರೇವತಿಗೆ ಹೇಳುತ್ತಿದ್ದಾನೆ.

ರೇವತಿಗೆ ಭಯ...... ಸಂದೇಹ !

ಮನ್ಮಥ ರೂಪಿನ ನಗು ಮುಖದ ಚೆಲುವ ಇಂತಹ ಸ್ವಾರ್ಥಿಯೇ....? ಕ್ರೂರಿಯೇ....?

ನಂಬಿಕೆ ಬರುತ್ತಿಲ್ಲ !

ಆದರೆ ಇದು ಪೂಜಾರಿ ಹೇಳುತ್ತಿರುವ ಕತೆ ಅಲ್ಲ. ಊರಿನವರು ಎಡತೊರೆ ಮನೆತನದ ಪ್ರಸನ್ನನ ಬಗ್ಗೆ ಇದೇ ಅಭಿಪ್ರಾಯವನ್ನು ಹೊಂದಿದ್ದಾರೆ. ಬೆಂಕಿ ಇಲ್ಲದೆ ಹೊಗೆ ಆಡುವುದೆ?

ಬೆಳ್ಳಗಿರುವುದೆಲ್ಲಾ ಹಾಲು ಅಲ್ಲ !

ಸುಣ್ಣದ ತಿಳಿ ಸಹ ಬೆಳ್ಳಗಿರುತ್ತದೆ. !

ನನಗೆ ಬೇಕಾಗಿರುವುದು ಮಮತೆ ಅಲ್ಲ. ರಹಸ್ಯ.... ನನ್ನ ಗೆಳತಿಯ ಸಾವಿನ ರಹಸ್ಯ !

ಅದನ್ನು ಕಂಡು ಹಿಡಿಯಲೇಬೇಕು !

ಮೀನ ಹುತ್ತದ ಹತ್ತಿರ ಬಿದ್ದಿದ್ದಳಂತೆ ! ಅವಳ ದೇಹದ ತುಂಬಾ ಹತ್ತಾರು ಹಾವುಗಳು ಸುತ್ತಿಕೊಂಡು ಒಂದು ಗಂಟೆಯ ಕಾಲ ಅಲ್ಲೇ ಹರಿಯುತ್ತಿತ್ತು ಅಂತ ಅದನ್ನು ಕಂಡಿರುವ ಊರಿನವರು ಹೇಳುತ್ತಾರೆ. ಇದು ಹೇಗೆ ಸಾಧ್ಯ?

ಹತ್ತಾರು ಹಾವುಗಳು ಒಂದು ಗಂಟೆಯ ಕಾಲ ಅವಳ ದೇಹದಲ್ಲೇ ಸುತ್ತಿಕೊಂಡಿರಲು ಹೇಗೆ ಸಾಧ್ಯ?

ರಾತ್ರಿ ಎಂಟು ಗಂಟೆ !

ಗೆಳತಿ ಮೀನಳ ಮನೆ. ಮನೆಯಲ್ಲಿ ರೇವತಿ ಈಗ ಎರಡನೆಯ ರಾತ್ರಿ ಕಳೆಯುತ್ತಿದ್ದಾಳೆ !

ಅದು ಮೀನಳ ಕೊಠಡಿ !

ರೇವತಿ ರೂಮಿನ ಬಾಗಿಲನ್ನು ಹಾಕಿಕೊಂಡು ಮಂಚದ ಅಡಿಯಲ್ಲಿ ಇದ್ದ ಟ್ರಂಕ್ ಅನ್ನು ಎತ್ತಿಕೊಂಡಳು.

ಮೊದಲೇ ಪ್ಲಾನ್ ಮಾಡಿಕೊಂಡಿದ್ದರಿಂದ ಹಿತ್ತಾಳೆ ಬೀಗ ತೆಗೆಯುವ ಪೇಚಾಟ, ಮಾಸ್ಟರ್ ಕೀ ಬಂಚ್ ರೆಡಿ ಮಾಡಿಕೊಂಡಿದ್ದಳು.

ಅರ್ಧ ಗಂಟೆಯ ಪ್ರಯತ್ನ !

ಇಲ್ಲಿಯವರೆಗೆ.........

ರೇವತಿಯ ಸಂದೇಹಗಳಿಗೆ ಪ್ರಸನ್ನ ಸರಿಯಾದ ಉತ್ತರವನ್ನು ಕೊಡುತ್ತಾನೆ. ರೇವತಿ ಕಾಡಿನ ರಸ್ತೆಯಲ್ಲಿ ನಡೆದುಕೊಂಡು ಬರುತ್ತಿರುವಾಗ ಅರೆಹುಚ್ಚ ಮಂಜಯ್ಯ ಎದುರಾಗುತ್ತಾನೆ. ಅವನಿಂದ ರೇವತಿಯನ್ನು ದೇವಸ್ಥಾನದ ಪೂಜಾರಿ ಕಾಪಾಡುತ್ತಾನೆ. ಪೂಜಾರಿಯ ಬೇಡದ ಮಾತುಗಳಿಂದ ರೇವತಿಗೆ ಪ್ರಸನ್ನನ ಮೇಲೆ ಪುನಹ ಸಂದೇಹ ಬರುತ್ತದೆ.

ಮುಂದೆ ಓದಿ..........

ಬೀಗ ಬಾಯಿ ತೆರೆದು ಕೊಂಡಿತು.

ಟ್ರಂಕಿನ ತುಂಬಾ ಮೀನಳ ಹಳೆಯ ಬಟ್ಟೆಗಳು ಮತ್ತು ಬೇಡದ ವಸ್ತುಗಳು ತುಂಬಿಕೊಂಡಿವೆ. ಎಲ್ಲವನ್ನು ತಡಕಾಡಿದಳು.

ಅಡಿಯಲ್ಲಿ...... ಹಳೆಯ ಸೀರೆಯ ಪದರಗಳ ನಡುವೆ ಇತ್ತು ರೆಡ್ ಕಲರ್ ರ್‍ಯಾಪರ್‌ನ ಡೈರಿ !

ಮೀನಳ ಮುದ್ದಾದ ಕೈಬರಹದ ಡೈರಿ !

ರೇವತಿ ಬಟ್ಟೆಗಳನ್ನು ಮೊದಲಿನಂತೆಯೇ ಜೋಡಿಸಿ ಬೀಗ ಹಾಕಿ ಟ್ರಂಕ್ ಅನ್ನು ಮಂಚದ ಅಡಿ ಇರಿಸಿದರು.

ಡೈರಿ ಓದುವ ಕುತೂಹಲ ಜಾಸ್ತಿ ಯಾಗುತ್ತಿದೆ !

ಹಾಸಿಗೆಯ ದಿಂಬನ್ನು ಗೋಡೆಗೆ ಓರಗಿಸಿ ಕೊಂಡು ರೇವತಿ ಡೈರಿಯನ್ನು ಓದಲು ಪ್ರಾರಂಭಿಸಿದಳು !

* * *

ಇತ್ತ ರಾತ್ರಿ ಹತ್ತು ಗಂಟೆಯ ಸಮಯ !

ಸಂಪಿಗೆ ಪುರದ ರಸ್ತೆಗಳು ಬಿಕೋ ಎನ್ನುತ್ತಿದೆ ! ಕೆಲವು ಬೀದಿಗಳಲ್ಲಿ ವಿದ್ಯುತ್ ದೀಪದ ಬೆಳಕು ಸಹ ಇರಲಿಲ್ಲ !

ಅದು ಎಡತೊರೆ ಬಂಗಲೆ !

ಕಂಬಳಿಯನ್ನು ಹೊದ್ದುಕೊಂಡಿದ್ದ ವ್ಯಕ್ತಿಯೊಂದು ಈಗ ಬಂಗಲೆಯ ಹಿಂಭಾಗಕ್ಕೆ ಬಂದು ಸುತ್ತಲೂ ನೋಡಿತು !

'ಗಮ್' ಎನ್ನುವ ಕತ್ತಲು !

ಆ ವ್ಯಕ್ತಿ ಈಗ ವಾಟರ್ ಪೈಪನ್ನು ಹಿಡಿದುಕೊಂಡು ಕೋತಿಯ ಹಾಗೆ ಸರಸರನೆ ಹತ್ತಲಾರಂಭಿಸಿತು !

ರೂಮಿನಲ್ಲಿ ದೀಪ ಉರಿಯುತ್ತಿತ್ತು !

ಆ ರೂಮಿನಲ್ಲಿ ವೀರಭದ್ರ ಮತ್ತು ಲಿಂಗಯ್ಯ ಮಂಚದ ಮೇಲೆ ಮಲಗಿ ಕೊಂಡಿದ್ದಾರೆ ! ಗಾಢವಾಗಿ ನಿದ್ರಿಸುತ್ತಿದ್ದಾರೆ.

ಈ ವ್ಯಕ್ತಿ ಈಗ ರಹಸ್ಯವಾಗಿ ಇರಿಸಿ ಕೊಂಡಿದ್ದ ಉದ್ದನೆಯ ಸೀಸೆಯನ್ನು ಹೊರಗೆ ತೆಗೆಯಿತು !

ಅಡ್ಡಪಟ್ಟಿ ಅಥವಾ ಕಂಬಿಗಳು ಇರ... ವಾದ್ದರಿಂದ ಆ ಕಿಟಕಿಯು ಮೂ... ತೂರಿಕೊಳ್ಳಲು ಪ್ರಯತ್ನಿಸಿತು !

ಅದೇ ಸಮಯಕ್ಕೆ ರೂಮಿನ ಬಾ... ತೆರೆಯಿತು. ಅತ್ತ ಕಡೆಯಿಂದ ಪ್ರಸನ್ನ ಬಂದ...

ಕಂಬಳಿಯನ್ನು ಸುತ್ತಿಕೊಂಡಿದ್ದ ... ಗಾಬರಿಯಿಂದ ಟೀಪಾಯಿಯನ್ನು ಎಡವಿ...

ಅದರ ಮೇಲೆ ಇದ್ದ ನೀರು ತುಂ... ಗ್ಲಾಸ್ ನೆಲದ ಮೇಲೆ ಬಿದ್ದು ಒಡೆ... ಹೋಯಿತು !

ಆ ಮುಸುಕುಧಾರಿ ಓಡಿ ಹೋಯಿತ...

ಈ ಮುಸುಕುಧಾರಿ ಯಾರು?

ಅಪರಾತ್ರಿಯ ವೇಳೆಯಲ್ಲಿ ಪ್ರಸ... ಅರೆಹುಚ್ಚರಾಗಿರುವ ಅಣ್ಣಂದಿರ ಕೋಣೆ... ಏಕೆ ಬಂದಿದ್ದನು? !

(ಮುಂದುವರೆಯುತ್ತ...

## ಚೆರಿಯಮನೆ ಸಿಂಚನ ಲಂಡನ್‌ಗೆ ಪ್ರಯಾಣ



ಮರಗೋಡು ಚೆರಿಯಮನೆ ಕೆ. ಶಶಿಧರ್ ಇವರ ಪುತ್ರಿ ಸಿ. ಎಸ್. ಸಿಂಚನ ಇವಳು ದಿನಾಂಕ 31-7-1999ರಿಂದ 14-8-1999 ತನಕ ನಡೆಯಲಿರುವ ಅಂತರಾಷ್ಟ್ರೀಯ ಸ್ಕೌಟ್ಸ್ ಮತ್ತು ಗೈಡ್ಸ್ ಶಿಬಿರಕ್ಕೆ ಆಯ್ಕೆ ಆಗಿ ತೆರಳಿದ್ದಾಳೆ. ಸಿಂಚನ ಮಂಗಳೂರು ಅಲೋಷಿಯಸ್ ಕಾಲೇಜಿನಲ್ಲಿ ಪ್ರಥಮ ಪಿ.ಯು.ಸಿ. ವಿದ್ಯಾರ್ಥಿಯಾಗಿದ್ದಾಳೆ. ಈ ಹಿಂದೆ ಇವಳು ರಾಷ್ಟ್ರಪತಿ ಪ್ರಶಸ್ತಿ ಅಲ್ಲದೆ 1997-98ರಲ್ಲಿ ರಾಜ್ಯಪಾಲ ಪ್ರಶಸ್ತಿಯನ್ನು ಪಡೆದಿದ್ದಾಳೆ. ಇವಳ ತಂದೆ ಶಶಿಧರ್ ಪ್ರಸ್ತುತ ಇನ್ಸ್‌ಪೆಕ್ಟರ್ ಹುದ್ದೆಯಲ್ಲಿದ್ದಾರೆ. ಇವಳ ಭವಿಷ್ಯಕ್ಕೆ ಕುಲದೇವ್ರು ವೆಂಕಟರಮಣ ಕೃಪಾಕಟಾಕ್ಷ ಸದಾ ಇರಲಿತ್ತೇಳಿ ಸಂಗಾತಿ ಹಾರೈಸುತ್ತದೆ.

**ಪಟ್ಟಡ ಶಿವಕುಮಾರ್**

ಕೊಡಗು ಸಂಗಾತಿ, ಪಾಕ್ಷಿಕ ಅನ್ನು ಕೊಂಡು ಓದಿರಿ.

## ನಗೆಹನಿ

**ಮೇಡಂ :** [ಹಾಜರಿ ಹಾಕುತ್ತಾ] ಇನ್ನು ಮೇಲೆ ಎಲ್ಲರೂ ಹಾಜ... ಕರೆದಾಗ ಮೇಡಂ ಅಂತ್ಲೇ ಹೇಳ್ಬೇಕು.

**ವಿದ್ಯಾರ್ಥಿಗಳು :** ಆಗ್ಲಿ ಸಾರ್ 'ಮೇಡಂ' ಅಂತ್ಲೇ ಹೇಳ್ತಿವಿ

**ಮೇಷ್ಟ್ರು :** ದೇವರಿಗೆ ಹತ್ತಿರದವರು ಯಾರೋ?

**ರಾಮು :** ನಮ್ಮಪ್ಪ ಸಾರ್

**ಮೇಷ್ಟ್ರು :** ಹೇಗೋ ತಲೆಹರಟೆ

**ರಾಮು :** ನಮ್ಮಪ್ಪ ಪೂಜಾರಿ ಸಾರ್

**ಮೇಷ್ಟ್ರು :** ಲೋಪಸಂಧಿಗೆ ಉದಾಹರಣೆ ಕೊಡು

**ಶಾಮು :** ಗೊತ್ತಿಲ್ಲ ಸಾರ್

**ಮೇಷ್ಟ್ರು :** ಭೇಷ್ ಗೊತ್ತು ಇಲ್ಲ = ಗೊತ್ತಿಲ್ಲ ಒಳ್ಳೆಯ ಉದಾಹರ...

**ಮೇಷ್ಟ್ರು :** ಯಾಕೋ ಮೂರು ಮಾರ್ಕನ್ನು ಮೂವತ್ತು ಮಾಡಿದೆ

**ರಂಗ :** ನೀವೇ ಹೇಳಿದಿರಲ್ಲ ಸಾರ್ ಸೊನ್ನೆಗೆ ಬೆಲೆ ಇಲ್ಲ ಎಂದು

**ಸಂಗ್ರಹ : ಮುಕ್ಕಾಟಿ ಎಲ್. ಸವಿ...**
**ಮದೆನಾಡ...**

## ಧೈರ್ಯ ಹೇಳ್ತ್

ಅರೆಭಾಷೆಗೆ ನಿಲ್ಲಿಕೆ ನೆಲೆ ಕೊಟ್ಟತ್ ಈ ಗೌಡ ಜನಾಂಗ
ಅದ್ಕೆ ಹಾರಿಕೆ ರೆಕ್ಕೆ ಪುಕ್ಕ ಕೊಟ್ಟ್ ಧೈರ್ಯ ಹೇಳ್ತ್ ಕೊಡಗು ಸಂಗಾ...

**ಸಂಗಾರು ಕೀರ್ತಿಪ್ರಸಾದ್, ಎಡವಾ...**

# ಕಾರ್ಗಿಲ್ ಸಮರದಲ್ಲಿ ಇನ್ನೊಬ್ಬ ಕೊಡಗಿನ ವೀರ ಯೋಧನ ಮರಣ

ಸುಮಾರು ಎರಡು ತಿಂಗಳ ಪಾಕ್ ಮತ್ತು ಉಗ್ರಗಾಮಿಗಳ ಸತತ ಕಾರ್ಯಚರಣೆಯಲ್ಲಿ ಪಾಲ್ಗೊಂಡ ಕೊಡಗಿನ ಮೈತಾಡಿಗ್ರಾಮದ ಎಲ್. ಗಣೇಶ್ ಆಕಾಲ ಮೃತ್ಯುವು ಆಕಸ್ಮಿಕವೂ ಹೌದು. ದೇಶದ ರಕ್ಷಣೆಯಲ್ಲಿ ತೊಡಗಿದ ಈ ವೀರ ಯೋಧನ ಸಾವು ಹಾವು ಕಡಿತದಿಂದ ರುವುದು ದೌರ್ಭಾಗ್ಯವೇ ಸರಿ. ಅಂದು ಜುಲೈ ಹದಿನಾರು, ಕಾಶ್ಮೀರ ಕಣಿವೆಯ ಕಾರ್ಗಿಲ್ ಪ್ರದೇಶದ ಪಿಂಡಿಯಲ್ಲಿ ಯೋಧ ಗಣೇಶ್ ತನ್ನ ‑ವ್ಯದಲ್ಲಿ ನಿರತ ಸಂದರ್ಭದಲ್ಲಿ ವಿಷ ಸರ್ಪವು ಕಡಿದುದರ ಪ್ರಯುಕ್ತ ಸಾವನ್ನಪ್ಪಬೇಕಾಯಿತು. ಆ ದಿನ ಭಾರತ ಮತ್ತು ಪಾಕ್ ದೇಶಗಳ ದ್ಧ ವಿರಾಮದ ದಿನಾಂಕದ ಕಡೆಯ ದಿನವಾಗಿತ್ತು. ಅಲ್ಲಿ ಭೀಕರ ಕಾಳಗ ನಡೆಯುತ್ತಿತ್ತು. ದೇಶ ರಕ್ಷಣೆಯ ಜವಾಬ್ದಾರಿ ಹೊತ್ತ ಈ ೀಧರು ಉಗ್ರಗಾಮಿಗಳು ತಂಗಿದ್ದ ಗುಡ್ಡ ಪ್ರದೇಶದತ್ತ ತೆವಳುತ್ತಾ ಬೆಟ್ಟವನ್ನು ವಶಪಡಿಸಿಕೊಳ್ಳುವ ಸಂದರ್ಭ ಕರಾಳ ರಾತ್ರಿಯಾಗಿದ್ದರಿಂದ ಲೆಯಲ್ಲಿ ವಿಷ ಸರ್ಪದ ಕಡಿತಕ್ಕೆ ಬಲಿಯಾಗಬೇಕಾಯಿತು. ಉಗ್ರಗಾಮಿಗಳೊಡನೆ ಹೋರಾಡುತ್ತಿದ್ದ ಸಮಯದಲ್ಲಿ ಹಾವು ಕಡಿದ ವಿಷಯ ತ್ತಾಗಲೇ ಇಲ್ಲ. ಅರ್ಧ ಗಂಟೆಯ ಬಳಿಕ ವಿಷವು ಮೈಯನ್ನು ವ್ಯಾಪಿಸಿದಾಗ ಇಪ್ಪತ್ತು ಕಿ. ಮೀಟರ್ ದೂರದ ಆಸ್ಪತ್ರೆಗೆ ಹೊತ್ತೊಯ್ದು ತ್ಸೆ ನೀಡುವಷ್ಟರಲ್ಲಿ ಯೋಧ ಗಣೇಶ ವೀರ ಸ್ವರ್ಗವನ್ನು ಪಡೆದಿದ್ದರು.

ಮೃತ ಗಣೇಶ್ ಭಾರತದ ಗಡಿ ಭದ್ರತಾ ಪಡೆಯಲ್ಲಿ ಹದಿನಾಲ್ಕು ವರ್ಷದ ಕಾಲ ಸೇವೆಗೈದಿರುತ್ತಾರೆ. ಇವರಿಗೆ ಪತ್ನಿ ಕಸ್ತೂರಿ ಮತ್ತು ಕ್ಕಳಾದ ಅಶ್ವಿನಿ (8) ಮತ್ತು ಅಶ್ವಥ್ (6) ವರ್ಷದ ಮಕ್ಕಳಿದ್ದಾರೆ. ಮೈತಾಡಿ ಗ್ರಾಮದ ಕಡುಬಡವ ಒಕ್ಕಲಿಗರ ದಿವಗಂತ ಲಕ್ಕೇಗೌಡ ತ್ತು ಲಕ್ಷ್ಮವ್ವ ದಂಪತಿಗಳಿಗೆ ಮೂವರು ಪುತ್ರರು. ಇಬ್ಬರು ಪುತ್ರಿಯರ ಪೈಕಿ ಓರ್ವ ಬೆಂಗಳೂರಿನಲ್ಲಿ ಪೋಲಿಸ್ ಸಿಬ್ಬಂದಿಯಾಗಿದ್ದು, ತ್ತೊಬ್ಬ ಸಂಸಾರದ ನಿರ್ವಹಣೆಯಲ್ಲಿ ಊರಿನಲ್ಲಿದ್ದು ಪುತ್ರಿಯರು ಇಬ್ಬರು ವಿವಾಹವಾಗಿದ್ದಾರೆ.

35 ವರ್ಷ ಪ್ರಾಯದ ಈ ವೀರ ಪುತ್ರನ ಪಾರ್ಥಿವ ಶರೀರವು ದಿನಾಂಕ ಜುಲೈ 18ರಂದು ಕೊಡಗಿನ ವಿರಾಜಾಪೇಟೆ ಸಮೀಪದ ಮೈತಾಡಿಗೆ ಗಮಿಸಿದಾಗ ಜನ ಸಮೂಹವು ಜಡಿ ಮಳೆಯಲ್ಲಿಯೂ ಅಂತಿಮ ದರ್ಶನ ಪಡೆಯಲು ಕಾತರದಲ್ಲಿ ಕಾಯುತ್ತಿದ್ದರು. ಅಗಲಿದ ವೀರ ಸೇನಾನಿಗೆ ೊದಲು ಗಡಿ ರಕ್ಷಣಾ ಪಡೆ ಗೌರವ ಅರ್ಪಣೆ ಸಲ್ಲಿಸಿದ ಬಳಿಕ ಜಿಲ್ಲಾ ಉಸ್ತುವಾರಿ ಸಚಿವ ಎಂ. ಸಿ. ನಾಣಯ್ಯ ಜಿಲ್ಲಾ ಆಡಳಿತ ಪರವಾಗಿ ಲ್ಲಾಧಿಕಾರಿ ಬಿ. ಆರ್. ಜಯರಾಮರಾಜೇ ಅರಸ್ ಜಿಲ್ಲೆಯ ಪೋಲೀಸ್ ಎಸ್ಪಿ ಭಾಸ್ಕರ್ ರಾವ್ ಇತರ ಹಲವಾರು ಪೋಲೀಸ್ ಅಧಿಕಾರಿಗಳು ಾಗೂ ಸಹಸ್ರಾರು ಸಂಖ್ಯೆಯಲ್ಲಿ ನೆರೆದಿದ್ದ ಜನಸ್ತೋಮವು ಗೌರವ ಸಲ್ಲಿಸಿ, ಅಂದು ಮಧ್ಯಾಹ್ನ ಹನ್ನೆರಡು ಗಂಟೆಯ ವೇಳೆಗೆ ಮೈ ತುಂಬಿ ರಿಯುತ್ತಿದ್ದ ಕಾವೇರಿ ತೀರದಲ್ಲಿ ತನಗೆ ಸ್ವಂತವಾದ ಒಂದಿಂಚು ಜಾಗವಿರದಿದ್ದ ಕಾರಣ ಕಾವೇರಿ ತೀರದಲ್ಲಿ ಶವ ಸಂಸ್ಕಾರ ನಡೆಸಿದ್ದು ಒಬ್ಬ ೀರ ಯೋಧನು ದೇಶ ರಕ್ಷಣೆಯ ಭಾರ ಹೊತ್ತ ಯೋಧನ ಚಿಂತಾಜನಕ ಸ್ಥಿತಿಯಾಗಿರುವುದು ನಮ್ಮೆಲ್ಲರ ದೌರ್ಭಾಗ್ಯವೇ ಸರಿ. ಶ್ರೀಯುತರ ಡು ಬಡತನದ ಸಂಸಾರದ ಹೊಣೆ ನಮ್ಮ ನಿಮ್ಮೆಲ್ಲರ ಕರ್ತವ್ಯವೂ ಸಹ ಹೌದಲ್ಲವೇ?

ವರದಿ-ಸಂಗಾತಿ

## ಹೆಗ್ಗಳಿಕೆ

1. ಪಂಜಾಬಿನ ಚಿನ್ನಾಬೆಟ್ ಊರಿನಲ್ಲಿರುವ ಮುನ್ನೂರು ಕುಟುಂಬಗಳಲ್ಲಿ ಪ್ರತಿ ಕುಟುಂಬದಲ್ಲೂ ಕೊನೇ ಪಕ್ಷ ಒಬ್ಬ ವ್ಯಕ್ತಿಯನ್ನು ಸೇನೆಯ ಪಡೆಗೆ ಕಳಿಸಿರುವುದು ಆ ಗ್ರಾಮದ ಹೆಗ್ಗಳಿಕೆಯಾಗಿದೆ.
2. ಕಾರ್ಗಿಲ್ ಕಾರ್ಯಾಚರಣೆಯ ಸಂದರ್ಭದಲ್ಲಿ ಎಂಟು ದಿವಸಗಳ ಕಾಲ ಪಾಕ್‌ನ ಸೆರೆಯಲ್ಲಿದ್ದ ಭಾರತೀಯ ವಾಯುಪಡೆಯ ಮಿಗ್ ಇಪ್ಪತ್ತೇಳರ ಪೈಲಟ್ ಆಗಿದ್ದ ಪ್ಲೈಟ್ ಲೆಫ್ಟಿನೆಂಟ್ ಎರಡು ತಿಂಗಳ ದೀರ್ಘಾವಧಿಯ ವೈದ್ಯಕೀಯ ರಜೆಯಲ್ಲಿದ್ದಾರೆಂದು ತಿಳಿದು ಬಂದಿದೆ.
3. ಕಾರ್ಗಿಲ್ ಸೇನಾ ಕಾರ್ಯಾಚರಣೆಯಲ್ಲಿ ನಾನೂರ ಹದಿನೇಳು ಭಾರತೀಯ ವೀರ ಯೋಧರು ವೀರ ಮರಣವನ್ನಪ್ಪಿದ್ದಾರೆ, ಅವರಲ್ಲಿ ಎಪ್ಪತ್ತೆರಡು ಮಂದಿ ಹರಿಯಾಣ ರಾಜ್ಯದ ವೀರರಾಗಿದ್ದಾರೆ.
4. ಕಾರ್ಗಿಲ್, ದ್ರಾಸ್, ಬಟಾಲಿಕ್ ಸೇನಾ ಕಾರ್ಯಚರಣೆಯಲ್ಲಿ ಹಿಮಾಚಲ ಪ್ರದೇಶದ ಮೂವತ್ತಾರು ಮಂದಿ ದೇಶ ರಕ್ಷಣೆಗಾಗಿ ಪ್ರಾಣವನ್ನು ಅರ್ಪಿಸಿದ್ದಾರೆ.
5. ಕೊಡಗುನಾಡಿನ ನಾಲ್ಕು ಜನ ವೀರರು ಕಾರ್ಗಿಲ್ ಸೇನಾ ಕಾರ್ಯಾಚರಣೆಯಲ್ಲಿ ವೀರ ಸ್ವರ್ಗವನ್ನು ಪಡೆದಿರುತ್ತಾರೆ.

* * *

ಮನೆಯಿಂದ ಯುದ್ಧ ರಂಗಕ್ಕೆ ಬಂದಾಗ ನಮ್ಮ ತಂದೆ, ತಾಯಿ, ಮಕ್ಕಳು, ಬಳಗ ಎಲ್ಲಾ ಯೋಚನೆ ಬರುವುದೇ ಇಲ್ಲ. ಕಣ್ಣ ಮುಂದೆ ಮಾತ್ರ ಭೂಮಿ ಮಾತ್ರ ಇರುತ್ತದೆ.
ಲಡಾಯಿ ಎಂಬುದು ನಮಗೆ ಆತಂಕ ಹುಟ್ಟಿಸುವ ಸಂಗತಿ ಅಲ್ಲ. ದೇಶಕ್ಕಾಗಿ ನಮ್ಮ ಅಭಿಮಾನವನ್ನು ಸಾರುವ ಅವಕಾಶವಾಗಿದೆ.

– ಕಾರ್ಗಿಲ್ ಗಾಯಾಳು : ಯೋಧ ಶಿವಶರಣಪ್ಪ, ತಾವರಖೇಡ.

## ಕೊಡಗು ಸಂಗಾತಿ

ಕೊ - ಡಗಿನ ಬೆಡಗಿನ ಸಿರಿಯನ್ನು
ಡ - ಂಗುರದ ರೀತಿಯಲ್ಲಿ
ಗು - ಡುಗು ಮಿಂಚಿನಂತೆ
ಸಂ - ಯಮ ಶಿಸ್ತಿನಿಂದ
ಗಾ - ನ ಕೋಗಿಲೆಯಂತೆ
ತಿ - ರುಗು ಬಾಣದಂತೆ ಹೇಳುತಿಹುದು
ಗೌಡ ಬಾಂಧವರಿಗೆ ಈ ನಮ್ಮ
ಕೊಡಗು ಸಂಗಾತಿ

ಮುಕ್ಕಾಟಿ ಎನ್. ರವಿಕುಮಾರ್,
ಚೇರಂಬಾಣೆ

## ಹನಿಗವನ

ನಮ್ಮಪ್ಪಂಗೆ ಸಿಟ್ಟ್ ಬಾಕಿಲೆ
ಬಂದರೆ ಅಂವ ಜನೇ ಆಕಿಲೆ
ಸಿಟ್ಟ್ ಬಾಕನ ಅಂವನ ನೋಡಕು
ಹೊಡ್ದವ ಪೆಟ್‌ಗೆ ಹನಿ ಹನಿ ಹನ್ಕಕು !

ಪೂಜಾರಿ ಎಂ. ಜಗದೀಶ್, ಬಿಳಿಗೇರಿ.

# ಗೌಡ ಮಹಿಳಾ ಒಕ್ಕೂಟದ ಪ್ರಬಂಧ ಸ್ಪರ್ಧೆಯಲ್ಲಿ ಸಮಾಧಾನಕರ ಬಹುಮಾ ಪಡೆದ ಲೇಖನ : ಗೌಡ ಸಂಸ್ಕೃತಿ : ಅಂದು, ಇಂದು, ಮುಂದೆ.

**ಶ್ರೀಯುತ ಉಳುವಾರನ ಸುರೇಶ್‌ಕುಮಾರ್,**

ಉಳುವಾರನ ತಿಮ್ಮಯ್ಯ ಮತ್ತು ಕಮಲಾಕ್ಷಿ ದಂಪತಿಗಳ ಪುತ್ರರಾಗಿ 1964ರ ಸೆಪ್ಟಂಬರ್‌ನಲ್ಲಿ ಮಡಿಕೇರಿಯಲ್ಲಿ ಜನಿಸಿದರು. ಇವರು ಚಿಕ್ಕಂದಿನಲ್ಲಿ ಮಡಿಕೇರಿಯಲ್ಲಿ ಬಿ.ಎಸ್ಸಿ. ಓದಿ ಮಂಗಳೂರಿನ ಮಂಗಳ ಗಂಗೋತ್ರಿಯಲ್ಲಿ ಎಂ. ಎಸ್ಸಿ. (ಫಿಜಿಕ್ಸ್) ಮಾಡುತ್ತಿದ್ದಾಗ ಅನಿವಾರ್ಯವಾಗಿ ಸಿಂಡಿಕೇಟ್ ಬ್ಯಾಂಕಿನಲ್ಲಿ ಉದ್ಯೋಗಿಯಾಗಿ ಸೇರ್ಪಡೆಯಾದರು. ಈಗ ಸಹಾಯಕ ಅಧಿಕಾರಿಯಾಗಿ ಚೈನ್ನೈನಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಇವರು ಪದವಿ ಪರೀಕ್ಷೆಯಲ್ಲಿ ಹೆಚ್ಚು ಅಂಕ ಗಳಿಸಿದ್ದಕ್ಕಾಗಿ ಕೊಡಗು ಗೌಡ ವಿದ್ಯಾಸಂಘದ ವತಿಯಿಂದ 1984-85ರ ಸಾಲಿನಲ್ಲಿ ದ್ವಿತೀಯ ಬಹುಮಾನವನ್ನು ಪಡೆದಿರುತ್ತಾರೆ. ಇವರು ಸಂಗಾತಿಗೆ ಆಗಿಂದಾಗೆ ಲೇಖನ, ಚುಟುಕುಗಳನ್ನು ಬರೆಯುತ್ತಾ ಈ ಮೊದಲೇ ತಮ್ಮನ್ನು ಪರಿಚಯಿಸಿ ಕೊಂಡಿದ್ದಾರೆ.

ಇವರು ಕುಂಭುಗೌಡನ ದೇವಯ್ಯ, ಮುತ್ತಮ್ಮನವರ ಮಗಳು ಅಮೃತ ಕುಮಾರಿಯನ್ನು (ವಕೀಲರು) ವಿವಾಹವಾಗಿ ಒಬ್ಬಳೇ ಒಬ್ಬಳು ಮಗಳು ಆಕಾಂಕ್ಷಳೊಂದಿಗೆ ಚಿಕ್ಕ ಕುಟುಂಬ ಚೊಕ್ಕ ಸಂಸಾರ ಸುಖದಿಂದಿರುವರು. ಇವರಿಗೆ ಸಂಗಾತಿಯ ಅಭಿನಂದನೆಗಳು.

– **ಸಂಪಾದಕಿ**

**ಅಂದು :** ಅಂದು ವೀರರಾಜರು ಆಮಂತ್ರಿಸಿದ್ದರಿಂದ ದಕ್ಷಿಣಕನ್ನಡದಲ್ಲಿ ನೆಲೆಸಿದ್ದ ನಮ್ಮ ಪೂರ್ವಜರು ತಮ್ಮ ಮನೆಮಠ ತೊರೆದು ಗೊಂಡಾರಣ್ಯವಾಗಿದ್ದ, ಆಧುನಿಕತೆಯ ಗಂಧಗಾಳಿ ಇರದ ಕೊಡಗಿನಲ್ಲಿ ಬಂದು ನೆಲೆಸಿದರು. ಕಾಡುಕಡಿದು, ಬೆಟ್ಟ ಅಗೆದು, ಗದ್ದೆ ಉತ್ತು ಊರನ್ನಾಗಿಸಿದರು. ಶತ್ರುನಾಶಕ್ಕಾಗಿ ರಾಜ ವಿನಂತಿಸಿದ್ದಾಗಲೆಲ್ಲಾ ಸೈನಿಕರಾಗಿ ಹೋರಾಡಿದರು. ಶೂರತನ, ಪ್ರಾಮಾಣಿಕತನ, ವಿನಯತೆ, ಪರಿಶ್ರಮದಿಂದ ಹೆಸರುವಾಸಿಯಾಗಿದ್ದರು. ಮೋಸ, ಕಪಟ ಎಂ ಏನೆಂಬುದೇ ಅರಿಯದವರಾಗಿದ್ದರು. ಅವರಲ್ಲಿದ್ದ ಸಂಕೊ ಸ್ವಭಾವ, ಆಧುನಿಕತೆಯ ಅಭಾವದಿಂದಾಗಿ ಹಾಗೂ ದೇಶಾಭಿಮ ದಿಂದಾಗಿ ಬ್ರಿಟಿಷರ ಜೊತೆ ಮೈತ್ರಿ ಹೊಂದಲು ಸಾಧ್ಯವಾಗಲೀ ಬ್ರಿಟಿಷರು ಭಾರತ ಬಿಟ್ಟು ತೆರಳಿದಾಗ ಗೌಡ ಜನಾಂಗಕ್ಕೆ ಬಹ ಕಡಿಮೆ ಆಸ್ತಿ, ತೋಟ ದೊರಕಿತು. ಬ್ರಿಟಿಷರಲ್ಲಿ ಅಡುಗೆ, ಮನೆಕೆಲ ತೋಟ ಕೆಲಸ ಮಾಡಿಕೊಂಡಿದ್ದ ಇತರ ಜನಾಂಗದವರಿಗೆ ಬಹಳ ಆ ದೊರಕಿತು. ಹೀಗೆ ಆರ್ಥಿಕವಾಗಿ ಬಹಳ ಹಿಂದುಳಿದುದರಿಂದ ನವ ಜನಾಂಗದ ಸಂಸ್ಕೃತಿಯ ಬೆಳವಣಿಗೆಗೂ ಧಕ್ಕೆಯಾಯಿತು. ಆದರ ತಮ್ಮ ಮೂಲಸ್ಥಾನ ತೊರೆದು ಬೇರೆ ಊರಿನಲ್ಲಿ ನೆಲೆಸಿ ಅಲ್ಲಿ ಸಂಸ್ಕೃತಿಯನ್ನು ಮೈಗೂಡಿಸಿಕೊಂಡು ಒಂದು ಹೊಸ ಸಂಸ್ಕೃತಿಯ ಹುಟ್ಟು ಹಾಕಿದರು. ಅವರ ಪೂರ್ವಿಕರು ನಡೆಸಿಕೊಂಡು ಬರುತ್ತಿ ಆಚಾರ, ವಿಚಾರ, ಹಬ್ಬ, ಹರಿದಿನ, ಪೂಜೆ, ಪುರಸ್ಕಾರ ಅಲ್ಲ ಕೊಡಗಿನ ಕಾವೇರಿಯನ್ನು ಇಗ್ಗುತಪ್ಪ ದೇವರನ್ನು ಮತ ಮಾರಿಯಮ್ಮ ದೇವರನ್ನೂ ತಮ್ಮದೇ ಆದ ಸಂಸ್ಕೃತಿಯೇ ಆಚರಿಸಲು ಪ್ರಾರಂಭಿಸಿದರು. ಕೊಡವ ಭಾಷೆಯನ್ನಾಡುವುದು ಒಂದ ಪ್ರತಿಷ್ಠೆಯ ವಿಷಯವೆಂದು ತಪ್ಪಾಗಿ ಭಾವಿಸಿ ಅಥವಾ ಬಲವಂತಕ ಕಟ್ಟುಬಿದ್ದು ತಪ್ಪುತಪ್ಪಾದರೂ ಕೊಡವ ಭಾಷೆಯನ್ನು ಆಡಲ ಪ್ರಾರಂಭಿಸಿದರು. ನಿಧಾನವಾಗಿ ತಮ್ಮ ಮೂಲಸಂಸ್ಕೃತಿಯನ್ನು ಮರೆತು ಅನುಕರಣೆಗೆ ಪ್ರಾಧಾನ್ಯತೆ ನೀಡಲು ಪ್ರಾರಂಭಿಸಿದರು ಇದರಿಂದ ಕೊಡವ ಜನಾಂಗದ ಅಪಹಾಸ್ಯಕ್ಕೆ ಹಾಗೂ ತೆಗಳಿಕೆ ಗುರಿಯಾದರು ಆದರೆ ಕೆಲವೇ ಮಂದಿ ತಮ್ಮ ಆತ್ಮಗೌರವವನ್ನು ಕಾಪಾಡಿಕೊಳ್ಳುವುದರಲ್ಲಿ ಸಫಲರಾದರು.

ಕೊಡಗು ಪ್ರತ್ಯೇಕ ರಾಜ್ಯವಾಗಿದ್ದ ಕಾಲದಲ್ಲಿ ನಮ್ಮ ಜನಾಂಗ ಆರ್ಥಿಕವಾಗಿ ಸಾಮಾಜಿಕವಾಗಿ ಮತ್ತು ತನ್ನ ಸಂಸ್ಕೃತಿಯನ್ನು ಕಾಪಾಡಿಕೊಳ್ಳುವುದರಲ್ಲಿ ಬಹಳ ಹಿಂದೆ ಬಿತ್ತು. ಕೆಲವೇ ಕೆಲವು ಮಂದಿ ವಿದ್ಯಾವಂತರಾಗಿ ಒಳ್ಳೆಯ ಹುದ್ದೆಯಲ್ಲಿದ್ದರು, ಉಳಿದವರ ಜೀವನ ಬಹಳ ಕಷ್ಟಮಯವಾಗಿತ್ತು. ಅವರು ಭೀಕರ ಪ್ರಕೃತಿಯ ವಿಕೋಪಗಳಿಂದ, ಕ್ರೂರ ಪ್ರಾಣಿಗಳಿಂದ, ಕಾಯಿಲೆಗಳಿಂದ ರಕ್ಷಿಸಿ ಕೊಳ್ಳಬೇಕಾಗಿತ್ತು. ಮೂಢನಂಬಿಕೆಗಳು ಅಪಾರವಾಗಿದ್ದವು. ಇಂತಹ ಆಪತ್ತುಗಳಿಂದ ರಕ್ಷಿಸಿಕೊಳ್ಳಲು ನಮ್ಮ ಜನಾಂಗ ಗುಂಪುಗುಂಪಾಗಿ ಸಂಘಜೀವಿಗಳಾಗಿ ವಾಸಿಸುತ್ತಿದ್ದರು. ತಮ್ಮದೆ ಆದ ಸಂಸ್ಕೃತಿಯನ್ನು ಆಗಿನ ಪರಿಸ್ಥಿತಿಗೆ ತಕ್ಕಂತೆ ಅಳವಡಿಸಿಕೊಂಡಿದ್ದರು. ಸಾಮಾಜಿಕ ಸಂಘಟನೆಯೆಂಬ ದೇಹಕ್ಕೆ ಸಂಸ್ಕೃತಿಯೇ ಜೀವಾಳವೆಂದು ಅವರು ಅರಿತಿದ್ದರು. ಆ ಸಂಸ್ಕೃತಿಯಲ್ಲಿ ನಯನಾಜೂಕಿಗಿಂತ ಹೆಚ್ಚು ಮಹತ್ವವನ್ನು ಪ್ರೀತಿ ವಿಶ್ವಾಸ, ಸ್ನೇಹ, ನ್ಯಾಯ, ಮನೋರಂಜನೆ, ಶೂರತನ ಇಂತವುಗಳಿಗೆ ಕೊಡಲಾಗಿತ್ತು. ಉಚ್ಛ ವಂಶದವರು ಪರಿಪಾಲಿಸುವ ಯಜ್ಞ, ಹೋಮ, ಮಂತ್ರ, ಶಾಸ್ತ್ರ, ಶಾಸ್ತ್ರೀಯ

ಗೀತ ಹಾಗೂ ನೃತ್ಯ, ಪ್ರಾಣಿದಯೆ, ಮದ್ಯಪಾನ ವಿಸರ್ಜನೆ ಇವು ಯಾವುದರ ಅವಶ್ಯಕತೆ ಅವರಿಗೆ ಇರಲಿಲ್ಲ. ತಾವಿದ್ದ ಪರಿಸರದಲ್ಲಿ ದನ್ನೆಲ್ಲಾ ಪರಿಪಾಲಿಸಲು ಸಾಧ್ಯವಿರಲಿಲ್ಲ. ಇದು ಯಾವುದೂ ಲ್ಲದೆಯೂ ಅವರ ಸಂಸ್ಕೃತಿಯಲ್ಲಿ ಒಂದು ಮೆರುಗಿತ್ತು. ಒಂದು ೀವಕಳೆ ಇತ್ತು. ಒಂದು ವಿಶಿಷ್ಟತೆ ಇತ್ತು ಮತ್ತು ಒಂದು ಯಮದಲ್ಲಿತ್ತು. ಅವರು ಆಚರಿಸುತ್ತಿದ್ದ ಸಂಸ್ಕೃತಿ ಯಾವ ಸ್ತಕದಲ್ಲಿಯೂ ಸಿಗುತ್ತಿರಲಿಲ್ಲ. ಅದು ಅವರೊಳಗೆ ಹಾಸು ೊಕ್ಕಾಗಿತ್ತು. ಅವರ ನಾಲಿಗೆಯ ಮೇಲೆ ಕುಣಿದಾಡುತ್ತಿತ್ತು.

**ಇಂದು :** ಇಂದು ಕಾಲ ಬದಲಾಗಿದೆ. ಆಧುನಿಕತೆಯ ಗಾಳಿ ಲವಾಗಿ ಬೀಸುತ್ತಿದೆ. ನಮ್ಮ ಹಿಂದಿನವರು ಪೋಷಿಸಿ ಬೆಳೆಸಿದ ನ್ನದೇ ಆದ ವಿಶಿಷ್ಟ ಸಂಸ್ಕೃತಿ ಈ ಬಿರುಗಾಳಿಗೆ ಸಿಕ್ಕಿ ತೂರಾಡುತ್ತಿದೆ. ಂದೆ ಆಚರಣೆಯಲ್ಲಿದ್ದ ಸಂಸ್ಕೃತಿಯ ಮರ್ಮವನ್ನು ಅರಿಯದೆ ಅದನ್ನು ರ್ಥಮಾಡಿಕೊಳ್ಳಲು ಯೋಗ್ಯತೆ ಇಲ್ಲದೆ ಅದನ್ನೆ ಹೀಯಾಳಿಸುತ್ತಿದ್ದಾರೆ. ನ್ನದೆ ಆದ ಸಂಸ್ಕೃತಿಯ ಪ್ರಭಾವದಿಂದ ಸಂಘಜೀವಿಗಳಾಗಿದ್ದ ನಮ್ಮ ನಾಂಗ ಆಧುನಿಕತೆಯಿಂದಾಗಿ ದಿಕ್ಕಾಪಾಲಾಗಿದೆ. ಇಂದಿನವರ ರ್ಥಿಕ ಸ್ಥಿತಿ ಸುಧಾರಿಸಿದ್ದರೂ ಸಹ ಇನ್ನಷ್ಟು ಬೇಕು ಎನ್ನುವ ಂಬಲದಲ್ಲಿ ನಿರತರಾಗಿದ್ದಾರೆ. ಜನಸಂಖ್ಯೆ ವಿಪರೀತ ಬೆಳೆದು ತನ್ನ ದೈನಂದಿನ ಜೀವನ ನಡೆಸುವುದರಲ್ಲಿಯೇ ಸೋತು ಸುಣ್ಣ ವಾಗುತ್ತಿದ್ದಾನೆ. ಇದೆಲ್ಲರ ನಡುವೆ ಅವನ ಹಿಂದಿನವರು ನಡೆಸಿಕೊಂಡು ಬರುತ್ತಿದ್ದ ಸಂಸ್ಕೃತಿ ನಿಧಾನವಾಗಿ ಕಣ್ಮರೆಯಾಗುತ್ತಿದೆ. ಹಣವೊಂದಿದ್ದರೆ ಸಾಕು ಎನ್ನುವ ಈ ಪ್ರಪಂಚದಲ್ಲಿ ತನ್ನದೇ ಆದ ಸಂಸ್ಕೃತಿಯ ಔಚಿತ್ಯವಾದರೂ ಏನು ಎಂದು ಪ್ರಶ್ನಿಸುತ್ತಿದ್ದಾನೆ. ಇಪ್ಪತ್ತೊಂದನೇ ಶತಮಾನಕ್ಕೆ ಕಂಪ್ಯೂಟರಿನಷ್ಟು ವೇಗವಾಗಿ ಮುನ್ನುಗ್ಗುತ್ತಿರುವ ನಮ್ಮ ಜನಾಂಗಕ್ಕೆ ಅಂದಿನ ಸಂಸ್ಕೃತಿ ಹಳಸಿದಂತೆ ಕಾಣುತ್ತಿದೆ. ಕೇಬಲ್ ಟಿ. ವಿ. ಯಲ್ಲಿ ಬರುವ ವಿವಿಧ ಪಾಶ್ಚಿಮಾತ್ಯ ದೇಶಗಳ ಕಾರ್ಯಕ್ರಮಗಳನ್ನು ಅನುಕರಿಸುವುದಲ್ಲದೆ ಅದನ್ನೆ ಮೀರಿಸುತ್ತಿದ್ದಾರೆ.

ಅಲ್ಲದೆ ಕನ್ನಡಕ್ಕಿಂತ ಸಣ್ಣಪದಗಳಲ್ಲಿ ಮನದಿಂಗಿತವನ್ನು ತಿಳಿಸಲು ಸಾಧ್ಯವಿರುವ ಅರೆಭಾಷೆಯನ್ನು ನಿಧಾನವಾಗಿ ಕೊಲೆ ಮಾಡುತ್ತಿದ್ದಾರೆ. ನಮ್ಮ ಜನಾಂಗದ ಸಂಸ್ಕೃತಿಯನ್ನು ಪುನರುದ್ಧಾರ ಗೊಳಿಸುವ ನಾಯಕನ ಕೊರತೆಯೂ ಇರುವುದರಿಂದ ಲಂಗರು ತಪ್ಪಿದ ಹಡಗಿನಂತಾಗಿದೆ. ಹಿಂದಿನವರು ಒಂದು ಮೂಲ ಉದ್ದೇಶವನ್ನು ಇಟ್ಟುಕೊಂಡು ರೂಪಿಸಿದ ಸಂಸ್ಕೃತಿಯ ಒಳಗುಟ್ಟನ್ನು ಅರಿಯದೆ, ಅದನ್ನು ಅನುಕರಿಸಲೂ ಆಗದೆ, ಬಿಡಲೂ ಆಗದೆ ಪರದಾಡುತ್ತಿದ್ದಾರೆ. ನಮ್ಮ ಹಿಂದಿನವರು ಪಾಲಿಸಿಕೊಂಡು ಬಂದಿದ್ದ ಸಂಸ್ಕೃತಿಯಲ್ಲಿ ಕೆಲವು ಮೂಢನಂಬಿಕೆಗಳು ಹಾಸುಹೊಕ್ಕಾಗಿರುವುದು ಇಂದಿನ ಜನಾಂಗಕ್ಕೆ ಅರಿವಾಗಿದೆ. ಇಂದಿನ ಜನಾಂಗ ದೈವ್ವ, ಭೂತಗಳ ಭಯದಿಂದ ಮುಕ್ತರಾಗಿದ್ದಾರೆ. ಆದರೆ, ನಮ್ಮ ಹಿಂದಿನವರ ಸಂಸ್ಕೃತಿಯ ಯಾವುದನ್ನು ಅನುಕರಿಸಬೇಕು ಯಾವುದನ್ನು ಬಿಡಬೇಕು ಎನ್ನುವುದರ ಜಿಜ್ಞಾಸೆಯಲ್ಲಿದ್ದಾರೆ.

ಮದುವೆ ಮತ್ತಿತ್ತರ ಶುಭ ಸಮಾರಂಭಗಳಲ್ಲಿ ಹಂದಿ, ಹೆಂಡ ನಮ್ಮ ಸಂಸ್ಕೃತಿಯ ಪ್ರತೀಕವೆಂದು ಬೀಗುವ ನಮ್ಮ ಜನಾಂಗ ತಿಳಿಯದೆಯೇ ಭಾರತದಲ್ಲಿರುವ ಅತ್ಯಂತ ಕೀಳು ಜನಾಂಗದ ಆಚರಣೆಯನ್ನು ಶುಭ ಸಮಾರಂಭಗಲ್ಲಿ ಅಳವಡಿಸಿ ಕೊಂಡಿದ್ದಾರೆ. ಮದುವೆಯಂತ ಶುಭ ಸಮಾರಂಭಗಳಲ್ಲಿ ಹಣವಂತರು ತಮ್ಮ ಶ್ರೀಮಂತಿಕೆಯನ್ನು ಹೆಂಡದ ಹೊಳೆ ಹರಿಸುವ ಮೂಲಕ ತಮ್ಮ ಒಣಪ್ರತಿಷ್ಠೆಯನ್ನು ಮೆರೆಸುವುದರಲ್ಲಿ ಪೈಪೋಟಿ ನಡೆಸಿದ್ದಾರೆ. ಸಭ್ಯ ಸುಸಂಸ್ಕೃತ ನಾಗರೀಕರಾಗಬೇಕಾದ ನಮ್ಮ ಜನಾಂಗದ ಅನೇಕರು ಇಂತಹವರ ಬಲಿಪಶುಗಳಾಗಿ ಕುಡಿದು, ರಾತ್ರಿ ಇಡೀ ಇಸ್ಪೀಟ್ ಆಡುವುದನ್ನು ನಾವು ಮದುವೆ ಮನೆಗಳಲ್ಲಿ ಕಾಣುತಲಿದ್ದೇವೆ. ಕೆಲವು ಮಹಿಳೆಯರು ಸ್ತ್ರೀ ಸ್ವಾತಂತ್ರ್ಯವನ್ನು ಸ್ವೇಚ್ಛಾಚಾರಕ್ಕೆ ಸಿಕ್ಕಿದ ಅನುಮತಿಯೆಂದು ತಪ್ಪಾಗಿ ಭಾವಿಸಿ ಸುಸಂಸ್ಕೃತಿಯ ಅವನತಿಗೆ ಕಾರಣರಾಗುತ್ತಿದ್ದಾರೆ.

ಈಗಿನ ನಮ್ಮ ಜನಾಂಗದ ಕೆಲವು ಉನ್ನತ ಹುದ್ದೆಯಲ್ಲಿರುವವರು ಅಥವಾ ಕೆಲವು ಶ್ರೀಮಂತರು ಅಂತರ್ಜಾತೀಯ ಮದುವೆ ಸಂಬಂಧ ಬೆಳೆಸುತ್ತಿರುವುದು ಹೆಚ್ಚಾಗುತ್ತಿದೆ. ಇದರಿಂದ ನಮ್ಮ ಸಂಸ್ಕೃತಿ ಕುಂಠಿತಗೊಳ್ಳಲು ಮೂಲ ಕಾರಣವಾಗಿದೆ.

**ಮುಂದೆ :** ಮುಂದಿನ ಜನಾಂಗ ಎಲ್ಲಾ ಸಂಸ್ಕೃತಿಯನ್ನು ಗೌರವಿಸುವಂತೆ ಮತ್ತು ತನ್ನ ಸಂಸ್ಕೃತಿಯನ್ನು ಅನುಕರಿಸುವಂತೆ ರೂಪಿಸಬೇಕು. ಈ ಪ್ರಪಂಚದಲ್ಲಿರುವ ಯಾವ ಸಂಸ್ಕೃತಿಯೂ ಕೀಳಲ್ಲ, ಯಾವುದೂ ಹೆಚ್ಚಲ್ಲ, ಯಾವುದೂ ಪರಿಪೂರ್ಣವೂ ಅಲ್ಲ. ಪ್ರತಿಯೊಂದು ಸಂಸ್ಕೃತಿಯೂ ಅದನ್ನುಅವಲಂಬಿಸಿರುವ ಜನರ ಭಾವನಾಸಾಮರ್ಥ್ಯ ಆಧ್ಯಾತ್ಮಿಕ ಪ್ರವೃತ್ತಿ, ಪರಿಸರ ಮುಂತಾದವುಗಳ ಮೇಲೆ ಅವಲಂಬಿತವಾಗಿರುವುದರಿಂದ ಉತ್ತಮ ನಾಗರೀಕರನ್ನು ರೂಪಿಸುವುದರಿಂದ ಉತ್ತಮ ಸಂಸ್ಕೃತಿ ಬೆಳೆಯುತ್ತದೆ. ಶಿಕ್ಷಣವೆಂದರೆ ದ್ವಿತೀಯ ಜನ್ಮ ಅಂದರೆ ಮರು ಹುಟ್ಟು ಇದು ಆಗದೆ ಸಂಸ್ಕೃತಿ ಬೆಳೆಯುವುದಿಲ್ಲ. ಮುಂದೆ ನಮ್ಮ ಸಂಸ್ಕೃತಿ ವಿಶಾಲವಾಗಿ ಬೆಳೆಸಿದರೆ ಸಾಲದು. ಅದನ್ನು ಆಳವಾಗಿ ಬೆಳೆಸಬೇಕು. ಅಂದರೆ ಜೀವನದ ಪ್ರತಿಯೊಂದು ಕಾರ್ಯದಲ್ಲಿ ಅದು ಹೊರಹೊಮ್ಮುವಂತಿರಬೇಕು. ಈ ನಿಟ್ಟಿನಲ್ಲಿ ನಾವು ಆಡುವ ಭಾಷೆ, ಉಡುವ ತೊಡುಗೆ ಸಹಕಾರಿಯಾಗುವುದರಿಂದ ಇದಕ್ಕೆ ಹೆಚ್ಚು ಗಮನ ನೀಡಬೇಕುಮತ್ತು **ಸಂಸ್ಕೃತಿ ಬಗ್ಗೆ ಸಾಕಷ್ಟು ಸಂಶೋಧನೆ ಅಧ್ಯಯನ ಆಗಬೇಕು. ಕಿರಿಯರು ಐಚ್ಛಿಕ ವಿಷಯವನ್ನಾಗಿ ಅಭ್ಯಸಿಸುವಂತಾಗಬೇಕು.**

ಸೂರ್ಯನು ಅಸ್ತನಾದನೆಂದು ಅಳುತ್ತ ಕುಳಿತರೆ ಚಂದ್ರನು ಕಾಣಿಸುವುದಿಲ್ಲ. ಹಾಗೆಯೇ ಹಿಂದಿನ ಸಂಸ್ಕೃತಿ ನಶಿಸುತ್ತಿದೆಯೆಂದು ಕೊರಗುತ್ತಾ ಕುಳಿತರೆ ಬಂದಿರುವ ನಮ್ಮ ಸಂಸ್ಕೃತಿ ಬೆಳೆಯುವುದಿಲ್ಲ. ಕಾಲಾನಂತರದಲ್ಲಿ ತುಕ್ಕು ಹಿಡಿದು, ಮಸುಕ್ಕಾಗುತ್ತಾ ಬಂದಿರುವ ನಮ್ಮ ಸಂಸ್ಕೃತಿಯನ್ನು ಮೇಲಿನ ಜಂಗನ್ನು ಒರೆಸಿ, ಧೂಳು ಜಾಡಿಸಿ, ಉಜ್ಜಿ ಮತ್ತೆ ಹೊಳಪನ್ನು ಕೊಡಬೇಕಿದೆ. ಹಳೆಬೇರು - ಹೊಸ ಚಿಗುರಿನ ನಿತ್ಯನೂತನ ಸಂಸ್ಕೃತಿಯ ಅವಶ್ಯಕತೆ ಇದೆ. ಕೇವಲ ಅನುಕರಣೆಯಿಂದ ಯಾವ ಸಂಸ್ಕೃತಿಯ ಪ್ರಗತಿಯೂ ಸಾಧ್ಯವಾಗುವುದಿಲ್ಲ.

ನಮ್ಮ ಸಂಸ್ಕೃತಿಯನ್ನು ಭಾರತದ ಇತರ ಸಂಸ್ಕೃತಿಯ ಕಡೆಗೆ ಒಯ್ಯಬೇಕೆ ಹೊರತು ಅದರಿಂದ ದೂರಸರಿದು ಮುರುಟಿ ಹೋಗಬಾರದು. ಅದು ನಿಂತ ನೀರಾಗಬಾರದು. ಈ ನಿಟ್ಟಿನಲ್ಲಿ ಮೊದಲು ಇತರ ಹಿಂದೂಗಳು ಆಚರಿಸುವ ದೊಡ್ಡ ದೊಡ್ಡ

**20 ನೇ ಪುಟಕ್ಕೆ**



# ಮಿಲ್ಲೆನಿಯಮ್ ಮರ್ಮ

ಕೆಲವರಿಗೆ '6th Sense' ಎಂದರೆ -'ಆರನೇ ಇಂದ್ರಿಯ' ಇರುತ್ತದಂತೆ. ಮುಂದೆ ನಡೆಯುವ ಘಟನೆಗಳ ಸುಳಿವು ಇವರ ಮೆದುಳಿಗೆ ಮುಂಚಿತವಾಗಿಯೇ ಹೊಳೆಯುತ್ತಿರುತ್ತದಂತೆ. ನಮ್ಮ ದೈನಂದಿನ ಬದುಕಿನಲ್ಲಾಗುವ ಘಟನೆಗಳ ಸೂಚನೆ ನಮಗೆ ಮುಂಚಿತವಾಗಿಯೇ ಆಗುತ್ತಿರುವ ಹಾಗಿದ್ದಿದ್ದರೆ ಎಷ್ಟು ಚೆನ್ನ, ಅಲ್ಲವೆ? ಭವಿಷ್ಯದ ಬಗ್ಗೆ ನಿಖರವಾಗಿ ಪ್ರವಾದಿಸುವುದು ಕಷ್ಟ ಸಾಧ್ಯ. ಆದರೆ, ನಮ್ಮ ಇತಿಹಾಸದಲ್ಲಿ ನಿಖರವಾದ ಭವಿಷ್ಯವಾಣಿ ನುಡಿದಿರುವ ಅನೇಕ ಉದಾಹರಣೆಗಳು ಕಂಡುಬರುತ್ತವೆ.

1999ನೇ ಇಸವಿಯ ಆಗಸ್ಟ್ 11ರಂದು 20ನೇ ಶತಮಾನತ ಕೊನೆಯ ಸೂರ್ಯಗ್ರಹಣವಾಗಲಿದೆ. ಯುರೋಪಿನ ಹಂಗೇರಿ ಹಾಗೂ ರುಮೇನಿಯಾ ಭಾಗಗಳಲ್ಲಿ ಮಾತ್ರ ಈ ಗ್ರಹಣ ಪ್ರಖರವಾಗಿ ಗೋಚರವಾಗುತ್ತದೆ. ಇದೇ ಸಮಯದ ಆಸುಪಾಸಿಗೆ ಭೂಮಿಗೆ ಒಂದು ಧೂಮಕೇತುವಿನ ಆಗಮನ ಕೂಡ ಆಗುತ್ತದೆ. "20ನೇ ಶತಮಾನದ ಅಂತ್ಯದಲ್ಲಿ ನಡೆಯುವ ಈ ಎರಡು ವಿಶೇಷಗಳೊಂದಿಗೇ ಮನುಕುಲದ ನಾಶದ ಆರಂಭವಾಗಲಿದೆ" ಹೀಗೆಂದು 400 ವರ್ಷಗಳ ಹಿಂದೆಯೇ ಜಗತ್ತಿಗೆ ಸಾರಿ ಹೇಳಿದ್ದವನು ಫ್ರಾನ್ಸಿನ ದಿವ್ಯಜ್ಞಾನಿ ಮತ್ತು ಖಗೋಳ ಶಾಸ್ತ್ರಜ್ಞ ನಾಸ್ಟ್ರಡಾಮಸ್ !

ನಾಸ್ಟ್ರಡಾಮಸ್ 16ನೇ ಶತಮಾನದಲ್ಲಿ ನುಡಿದಿದ್ದ ಭವಿಷ್ಯವಾಣಿಯ ಬಹುಪಾಲು ಸತ್ಯವಾಗಿರುವುದು ಗಮನಾರ್ಹ. ಹಿಟ್ಲರನ ಅಟ್ಟಹಾಸ, ನೆಪೋಲಿಯನ್, ಫ್ರಾನ್ಸ್ ಹಾಗೂ ರಷ್ಯಾದ ಕ್ರಾಂತಿಗಳು ಇದಕ್ಕೆ ಸಾಕ್ಷಿ. ತಾನು ದಿವ್ಯದೃಷ್ಟಿಯಿಂದ ಕಂಡದ್ದನೆಲ್ಲಾ ನಾಸ್ಟ್ರಡಾಮಸ್ 'Centuries' ಎಂಬ ಪುಸ್ತಕದಲ್ಲಿ ಬರೆದಿಟ್ಟಿದ್ದಾನೆ.

ನಾಸ್ಟ್ರಡಾಮಸ್ ಪ್ರಕಾರ, ನಾವು 21ನೇ ಶತಮಾನಕ್ಕೆ ಕಾಲಿಡುತ್ತಿರುವಾಗಲೇ 3ನೇ ಮಹಾಯುದ್ಧ ಆರಂಭವಾಗಿಬಿಟ್ಟಿರುತ್ತದೆ. ಇಸ್ಲಾಂ ಮತ್ತು ಕ್ರಿಶ್ಚಿಯನ್ನರ ನಡುವೆ ನಡೆಯುವ ಈ ಧರ್ಮಯುದ್ಧಕ್ಕೆ ಕಾರಣ ಜಾತೀಯತೆ ಬಗ್ಗೆ ಕಲಹಗಳು ಮತ್ತು ದೇವರನ್ನು ಹೇಳಿಕೊಂಡು ಭಿನ್ನಾಭಿಪ್ರಾಯ. ಈ ಯುದ್ಧದ ವಿಷಬೀಜವನ್ನು ಭಿತ್ತಿ, ಯುದ್ಧಕ್ಕೆ ಮುಖ್ಯ ಕಾರಣಕರ್ತನೆನಿಸಿಕೊಳ್ಳುವ ವ್ಯಕ್ತಿ ಈಗಿನ ಮಂಗೋಲಿಯಾ ಅಥವಾ ದಕ್ಷಿಣ ಚೈನಾದಲ್ಲಿನ ವಾಸಿ. 1936ರಿಂದ 1945ನೇ ಇಸವಿಯವರೆಗೆ ನಡೆದ 2ನೇ ಮಹಾಯುದ್ಧಕ್ಕಿಂತ ಘೋರವಾಗಿ ನಡೆಯುವ 3ನೇ ಮಹಾಯುದ್ಧದಿಂದಾಗಿ ಯು.ಕೆ. ಜರ್ಮನಿ, ಅಮೇರಿಕಾ, ಫ್ರಾನ್ಸ್, ಇರಾನ್, ಇರಾಕ್ ಹಾಗೂ ಅರೇಬಿಯಾದ ಕೋಟ್ಯಾಂತರ ಜನ ಸಾವು ನೋವುಗಳನ್ನು ಅನುಭವಿಸುತ್ತಾರೆ.

1999ರಿಂದ 2000 ಇಸವಿಯ ನಡುವೆ ವಿಶ್ವದ ಇತಿಹಾಸದಲ್ಲಿ ಅನೇಕ ಪ್ರಮುಖ ಬದಲಾವಣೆಗಳಾಗುತ್ತವೆ. ಈ ಯುದ್ಧದ ಸಮಯದಲ್ಲಿ ಅಮೇರಿಕಾ ತಾನು ಇದುವರೆಗೆ ಸುಪ್ತವಾಗಿರಿಸಿಕೊಂಡಿದ್ದ ಅಣುವಸ್ತ್ರಗಳನ್ನು ಪ್ರಯೋಗಿಸಲು ಹಿಂಜರಿಯುವುದಿಲ್ಲಾ. ಯುದ್ಧದ ಫಲಿತಾಂಶ ಕ್ರಿಶ್ಚಿಯನ್ನರ ಮೇಲೆ ಇಸ್ಲಾಂ ಧರ್ಮದ ಮೇಲ್ಮೆ! ಜಗತ್ತಿನಾದ್ಯಂತ ಶಾಂತಿಪರಿಪಾಲಕರು ಮೂಕಸಾಕ್ಷಿಗಳಾಗಿ ನೋಡುವಂತಾಗುವುದಲ್ಲದೆ, ಈ ಕಲಹದಿಂದ 2025ನೇ ಇಸವಿಯ ಹೊತ್ತಿಗೆ ಎರಡು ಬಿಲಿಯನ್ ಜನರ ಸಾವು.

ಜಗತ್‌ಪ್ರಸಿದ್ಧವಾದ ಪ್ಯಾರಿಸ್, ಲಾಸ್‌ಏಂಜಲೀಸ್, ಸ್ಯಾ ಫ್ರಾನ್ಸಿಸ್ಕೊ ಹಾಗೂ ನ್ಯೂಯಾರ್ಕ್ ನಗರಗಳು ನಾಶವಾಗುವುದಲ್ಲ 2001 ಇಸವಿಯ ನಂತರ ಅಟ್ಲಾಂಟಿಕ್ ಸಾಗರಕ್ಕೆ ಬೀಳು ಉಲ್ಕೆಯಿಂದಾಗಿ ಎರಡು ಭಾರಿ ಭೂಕಂಪನವಾಗುತ್ತದೆ. ಇದ ಪರಿಣಾಮವಾಗಿ ಆಫ್ರಿಕಾ, ಗ್ರೀಸ್ ಮತ್ತು ಉತ್ತರ ಅಮೇರಿ ನಗರಗಳು ತತ್ತರಿಸುತ್ತವೆ. ಇನ್ನೊಂದು ಗಮನಾರ್ಹ ಸಂಗತಿಯೆಂದ ಸೆಪ್ಟೆಂಬರ್ 2001ನೇ ಇಸವಿಗೆ ಭೂಲೋಕದ ಏಳು ಅದ್ಭುತಗಳಲ್ಲೊಂದಾ ಪಿರಮಿಡ್ ಕುಸಿದುಹೋಗುವುದಂತೆ 2000-2025ರವರೆ ನಡೆಯುವ ಇಷ್ಟೆಲ್ಲಾ ಅನಾಹುತಗಳು ಭಾರತದ ಮೇಲೆ ನೇರ ಪ್ರಭಾ ಬೀರುವುದಿಲ್ಲ; ಏನೇ ಕಷ್ಟನಷ್ಟಗಳು ಬಂದರ ಭಾರತ ತ ಅಸ್ತಿತ್ವವನ್ನುಳಿಸಿಕೊಂಡು ಬರುತ್ತದಂತೆ.

ತತ್ವಜ್ಞಾನಿಗಳ ಪ್ರಕಾರ 2025ನೇ ಇಸವಿಗೆ ಹೊಸ ನಾಗರೀಕತೆ ಆರಂಭ ಎಂದಿದ್ದರೂ, ಬೈಬಲ್‌ನ ಪ್ರಕಾರ ಭೂಲೋಕದ ಅಸ್ತಿ 7000 ಇಸವಿಯವರೆಗೆ.

ನಾವೆಲ್ಲ ಈ ಶತಮಾನದಲ್ಲೇ ಹುಟ್ಟಿರುವುದು ನಮ್ಮೆಲ್ಲ ಪುಣ್ಯ ಎಂದು ಕೊಳ್ಳೋಣವೇ ನಮ್ಮ ಮುಂದಿನ ಪೀಳಿಗೆ ಹುಟ್ಟುತ್ತಲೆ ಯುದ್ಧ, ದ್ವೇಷ, ಜಾತಿಕಲಹಗಳನ್ನೆದುರಿಸಬೇಕು ಎಂಬುದು ದುಃ ಸಂಗತಿ. ಹಿಂದೊಂದು ದಿನ ಸ್ಕೈಲಾಬ್ ಉಪಗ್ರಹ ಭೂಮಿಗೆ ಬಿದ್ ನಾವೆಲ್ಲ ನಶಿಸಿಹೋಗುತ್ತೇವೆ ಎಂದು ತಿಳಿದಾಗ ಜನರು ಹೋಮ ಪ್ರಾರ್ಥನೆಗಳನ್ನು ಮಾಡುತ್ತಾ ದೇವರನ್ನು 'ರಕ್ಷಿಸು' ಎಂದು ಮೊ ಹೊಕ್ಕರು. ಮತ್ತೆ ಕೆಲವರು ಮನೆಯವರನ್ನೆಲ್ಲಾ ಸೇರಿಸಿ ಪೆಟ್ಟಿಗೆಯಲ್ಲಿ ಕೂಡಿಟ್ಟದ್ದನ್ನೆಲ್ಲಾ ಮಾರಿ, ತಿಂದು ಕುಡಿದು ಮಜಾ ಮಾ ನಿಶ್ಚಿಂತೆಯಿಂದ ಮಲಗಿ ಎದ್ದರಂತೆ, ನೆನ್ನೆ ಕಳೆದಿದೆ. ನಾಳೆ ಇನ್ನೂ ಬಂದಿಲ್ಲ, ಇಂದು ನಮ್ಮದೇ. ಭವಿಷ್ಯದ ಬಗ್ಗೆ ದಿನಾ ಹೆದರುತ್ತಾ ಸಾವಿರ ಭಾರಿ ಸಾಯುವುದಕ್ಕಿಂತ ಅದನ್ನೆಲ್ಲಾ ಮರೆತು ಸಂತೋಷದಿಂದಿರಲು ಪ್ರಯತ್ನಿಸೋಣವೇ? ನಾಳೆ ಎಂಬುದು ಹಾಳು; ಇವತ್ತು ಪಡೆದು ಸುಖ ಮಾತ್ರ ನಮ್ಮದು.

ಎಡಿಕೇರಿ ಸುದರ್ಶನ
ಬೆಂಗಳೂರು.

---

**ಕಾರ್ಗಿಲ್ ನಿಧಿಗೆ ಕುಶಾಲನಗರ ಗೌಡ ಸಮಾಜದ ವತಿಯಿಂದ ಕಾಣಿಕೆ.**

ದಿನಾಂಕ 3-7-1999ರಲ್ಲಿ ಸಮಾಜದ ಕಾರ್ಯಕಾರಿ ಮಂಡಳಿಯು ಸಭೆ ಸೇರಿ ಸರ್ವಾನುಮತದಿಂದ ಕಾರ್ಗಿಲ್ ಯುದ್ಧ ಸಂತ್ರಸ್ಥರಿಗಾಗಿ ರೂ. 5000/-ವನ್ನು ಪ್ರಧಾನ ಮಂತ್ರಿಯವರ ರಕ್ಷಣಾ ನಿಧಿಗೆ ಕೊಡಗು ಜಿಲ್ಲಾ ಅಧಿಕಾರಿಗಳ ಮುಖಾಂತರ ಕಳುಹಿಸಲಾಗಿದೆ.

ಗೌಡ ಸಮಾಜ ಬೆಂಗಳೂರು ಇವರಿಂದ ಧನ ಸಹಾಯಕ್ಕೆ ಮನವಿ ಪತ್ರ ಬಂದಿದ್ದು, ಸಭೆಯಲ್ಲಿ ಚರ್ಚಿಸಿ ಮೇಲಿನ ಸಮಾಜದ ವತಿಯಿಂದ ರೂ. 5000/-ವನ್ನು ದಾನವಾಗಿ ಅಧ್ಯಕ್ಷರು ಗೌಡ ಸಮಾಜ ಬೆಂಗಳೂರು ಇವರಿಗೆ ಕಳುಹಿಸಿ ಕೊಡಲಾಗಿದೆ.

**ವರದಿ : ಕೊಡಗನ ರಮೇಶ್**
**ಕಾರ್ಯದರ್ಶಿ, ಗೌಡಸಮಾಜ, ಕುಶಾಲನಗರ**

---

# ಕರಿಚಿನ್ನ -ಧಾರಾವಾಹಿ-30

ಮೂಲಕಥೆ : ಅಶ್ವಥಿ ಅರವಿಂದ್

ಅರೆಭಾಷೆಗೆ] : ಎಂ. ಇ. ಮಹಮ್ಮದ್

ಸರ್ಕಲ್ ಇನ್ಸ್‌ಪೆಕ್ಟರ್ ಮೊದ್‌ಲ್ ಒಪ್ಪಿಗೆ ಕೊಡ್‌ದೇ ಹೋದ್ರೂ ಪ್ರಭಾಕರನ ಲಾಯರ್ ಪಾಯಿಂಟಿಗೆ ತಲೆ ತಗ್ಗ್‌ಸ್‌ಕಾತ್.

ಫ್ಯಾಕ್ಟ್ ಮಾದಯ್ಯ ಮೊದ್‌ಲ್ ಬಿಡುಗಡೆಗೆ ಒಪ್ಪಿತ್‌ಲೆ. ಕಡೆಗೆ ಪ್ರಭಾಕರ ಹೇಳ್ತ್.

"ಈ ಕೊಲೆ ಮಾಡ್‌ದಂವ ಚಂಗುಮಣೀಂತ ಗೊತ್ತಾವ್ಟುಟು. ಅವ ತನ್ನ ತಪ್ಪುನ ಒಪ್ಪಿಕಂಡುಟ್. ಕೇಸ್ ಕೋರ್ಟ್‌ಗೆ ಹೋದ ಮ್ಯಾಲೆ ಸತ್ಯ ಹೊರಗೆ ಬರದೆ ಇರಕಿಲೆ. ಸುಮ್ಮನೆ ಈ ಲಾಕಪ್ ಒಳಗೆ ಯಾಕೆ ಕಷ್ಟ ಬಾದು ಹೇಳ್? ಒಂದು ವೇಳೆ ಗಾಳಿ ಮರ ಸೋಮಯ್ಯಂಗೂ ಅವನ ಮಗಳ್ ನೀಲೂಗೂ ಬೇಕಾಗಿ ನೀನ್ ಈ ತ್ಯಾಗ ಮಾಡಿಕೆ ಇಳಿದಿದ್ರೆ ನಿಮ್ಮ ಈ ಪೇಚಾಟ ಫಲ ಕೊಡಕಿಲ್ಲೆ. ನಿನ್ನ ತ್ಯಾಗಂದ ನೀಲು ಬಚಾವಾಗಿ ಉಳಿಯಂಗೆ ಇಲ್ಲೆ. ಅವ್ಳು ಈಗಳೇ ಕಾಂಬಲೆ. ಈ ಸಮಯಲಿ ಲಾಕಪ್ ಒಳಗೆ ಇರೊ ಬದ್ಲ್ ಹೊರಗೆ ಬಂದ್ ಅವಳ್ನ ಹುಡುಕಿಕಂಡು ಹಿಡಿಯೊ ಕೆಲ್ಸ ಮಾಡ್ದರೆ ಒಂದ್ ರೀತಿಲಿ ಪ್ರಯೋಜನ ಅಕೆ ಸಾಕ್."

ಅಡ್ವೋಕೇಟ್‌ನ ಮಾತ್‌ಲಿ ಅರ್ಥ ಉಟ್ಟುತ ಆತ್ ಮಾದಯ್ಯಂಗೆ. ನೀಲು ಗೂಡೆ ಕಾಣೆಯಾಗುಟೂತ ಹೇಳ್‌ಕನ ಮಾದಯ್ಯಂಗೆ ಗಾಬರಿ ಆತ್.

ಈ ಸಂಗತಿಲಿ ಬೋರ್‌ಗುಡ್ಡೆ ದೇವಯ್ಯನ ಕೈವಾಡ ಉಟ್ಟುತ ಅಂವ ಗೇನ ಮಾಡ್ತ್. ಹಂಗೆ ಆಗಿದ್ದರೆ ಆ ಗೂಡೆ ಬದುಕಿ ಇರುದೇ ಕಷ್ಟ. ಒಳ್ಳೆ ಜಿಂಕೆ ಹಂಗೆ ಓಡಾಡ್ತಿದ್ದ ಚುರುಕಿನ ಗೂಡೆ ಅದ್. ರಂಜನ್‌ನ ಕೈಯಿಂದ ಕಾಪಾಡಿ ಕಂಡಿದ್ದ ಮಾನನ ಅವನ ಅಪ್ಪ ದೇವಯ್ಯ ಕಳೆದಿರಕೂ ಸಾಕ್ !

ಅಯ್ಯೋ ವೆಂಕಟ್ರಮಣ ಸ್ವಾಮಿ, ಇದ್ ಎಂತ ಒಂದ್ ಯೋಗ? ರಂಜನ್‌ದ್ ಸಾವಾಗಲಿ, ಚಂಗುಮಣಿದ್ ಸರವುಂಡರ್ ಆಗಲಿ ತನ್ನ ತ್ಯಾಗ ಆಗಲಿ ಇದೊಂದು ಕೂಡ ಆ ಗೂಡೆನ ಜೀವ ಉಳ್‌ಸ್ಸಿಕ್ಕೆ ಸಹಾಯ ಆಗದೇ ಹೋತಲ್ಲ ದೇವಾ ! ತಾನ್ ಹೊರಗೆ ಇದ್ದಿದ್ದರೆ ಒಂದ್ ವೇಳೆ ಅವಳ ಜೀವನ ಬಚಾವು ಮಾಡ್‌ಕಾಗಿತ್ತ್.

* * *

ಚಂಗುಮಣಿ ಕೋರ್ಟ್‌ಲಿ ತನ್ನ ತಪ್ಪುನ ಒಪ್ಪಿಕಂಡತ್. ರಂಜನ್‌ದ್ ಕೊಲೆ ನಡ್‌ದ ದಿನ ಮಾದಯ್ಯ ಮಂಗಳೂರಿಗೆ ಹೋಗಿತ್ತ್‌ತ ಲಾಯರ್ ಪ್ರಭಾಕರ್ ವಾದ ಮಾಡ್ತ್. ಅದ್ಕೆ ಸರಿಯಾದ ಸಾಕ್ಷಿ ಉಟ್ಟುತ ಹೇಳ್‌ತ್.

ಫ್ಯಾಕ್ಟ್ ಮಾದಯ್ಯಂಗೆ ಜಾಮೀನ್ ಸಿಕ್ತ್. ಚಂಗುಮಣಿನ ಹದಿನೈದು ದಿನ ರಿಮ್ಯಾಂಡ್‌ಗೆ ಕೊಟ್ಟತ್. ಫ್ಯಾಕ್ಟ್ ಮಾದಯ್ಯ ಜಾಮಿನ್‌ಲಿ ಬುಡುಗಡೆ ಆದ ಸುದ್ದಿ ಬೋರ್‌ಗುಡ್ಡೇಲಿ ಕಾಡಿಗೆ ಬಿದ್ದ ಬೆಂಕಿ ತರ ಎಲ್ಲ ಕಡೆಗೂ ಕಿಮಿಯಿಂದ ಕಿಮಿಗೆ, ಬಾಯಿಂದ ಬಾಯಿಗೆ ಹಬ್ಬಿತ್.

ಸುದ್ದಿ ಬೋರ್ ಗುಡ್ಡೆ ದೇವಯ್ಯನ ಕಿವಿಗೆ ಸಹ ಬೀಳದೆ ಇರ್ದ?

"ಆ ಬೊಡ್ಡಿ ಮಂಜನ ಜಾಮೀನ್‌ಲಿ ಬುಡ್ಸಿದಂವ ಯಾರ್? ಈ ಬೋರ್‌ಗುಡ್ಡೆ ದೇವಯ್ಯನ ವಿರುದ್ಧ ತಲೆ ಎತ್ತಿದ ಎರೆಹುಳ ಯಾರ್‌ತ ಒಮ್ಮೆ ಗೊತ್ತಾಕುಲ.....?"

ದೇವಯ್ಯ ಒಡನೆ ಸರ್ಕಲ್ ಇನ್ಸ್‌ಪೆಕ್ಟರ್‌ಗೆ ಫೋನ್ ಮಾಡ್ತ್.

"ನೀನಲ್ಲಿ ಆ ಕಾಕಿ ಬಟ್ಟೆ ಹಾಕಂಡ್ ಅಲ್ಲಿ ಕುದ್ದ್‌ಕಂಡ್ ಕಡ್ಲೆ ತಿಂತಾ ಇದ್ಯ ಮಾರಾಯಾ? ಅಲ್ಲಿ ಆಕಾಶದಲ್ಲಿರುವ ನಕ್ಷತ್ರನ ಲೆಕ್ಕಾ ಹಾಕ್ತಾ ಒಳನಾ?

"ಎಂತದ್ ದೇವಯ್ಯಣ್ಣ?" ಸರ್ಕಲ್ ಇನ್ಸ್‌ಪೆಕ್ಟರ್ ಕೇಳ್ತ್

"ಆ ಫ್ಯಾಕ್ಟ್ ಮಾದಯ್ಯ ಹೆಂಗೆ ಮಾರಾಯ ನಿನ್ನ ಕಸ್ಟಡಿಯಿಂದ ಹೊರಗೆ ಬಂದದ್? ಅವ್ನ ಬುಡ್ಸಿದವು ಯಾರ್? ಯಾರ್‌ನ ಕೇಳಿ ಬುಡ್ಸಿದ್? ಈ ಯುದ್ಧಲಿ ನ್ಯಾಯಾ ಧರ್ಮ ಒಂದೂ ಇಲ್ಲದಾಗೋತಾ?"

"ಅಯ್ಯೋ ದೇವಯಣ್ಣಾ ಅದಾ?"

"ಏನೂ ಹೇಳ್‌ಬೇಡ ನಿಂಗೆಲ್ಲ ಈ ಖಾಕಿ ಬಟ್ಟೆ ಹೇಳ್‌ದ್ದಲ್ಲ. ಯಾವುದಾರ್ ಸಮುದ್ರದ ಕರೆಗೆ ಹೋಗಿ ಬರ್‍ತಾ ಇರೊ ಅಲೆಗಳನ್ನು ಲೆಕ್ಕ ಹಾಕಿಕೆ ಮಾತ್ರ ನೀನ್ ಲಾಯಾಕ್"

ಸರ್ಕಲ್ ಇನ್ಸ್‌ಪೆಕ್ಟರ್‌ಗೆ ದೇವಯ್ಯನ ಆ ಇನ್‌ಸೆಲ್ಟ್‌ನ ಮಾತ್ ಕೇಳ್‌ಕಾಕನ ಸ್ವಲ್ಪ ಸಿಟ್ಟ್ ಬಂದರು ದೇವಯ್ಯಂಗೆ ಹೇಳೂಂಗೆ ಇಲ್ಲೆ. ಕಾರಣ ದೇವಯ್ಯ ಹಿಂದೆ ಮುಂದೆ ಬೇರೆ ಬೇರೆ ಕೇಸ್‌ಗೆ ಅವಂಗೆ ಸಾವಿರಾರ್ ರೂಪಾಯಿ ಕೊಟ್ಟುಟು ಅಲ್ಲದೆ. ಅಂವ ಇಪ್ಪತ್ತೈದ್ ಸಾವ್ರ ಹಣ ಮಗಳ ಮೊದ್ವೆಗೇತ ತಕಂಡದ್ ಇಂದ್ ಕೂಡ ದೇವಯ್ಯಂಗೆ ವಾಪಾಸ್ ಕೊಟ್ಟಿತ್‌ಲೆ. ಹಿಂಗಾಗಿ ಸರ್ಕಲ್ ಇನ್ಸ್‌ಪೆಕ್ಟರ್‌ಗೆ ಒಂದ್ ರೀತಿ ಮುಲಾಜ್ ಕೂಡ ಏನಿಲ್ಲೆ, ಮಾದಯಂಣಾ......

"ಫ್ಯಾಕ್ಟ್ ಮಾದಯ್ಯನ ನಿಮ್ಮ ಮಂಜ ಜೀವನ್ ಬುಡ್ಸಿದ್ ದೇವಯಣ್ಣ"

"ಹೌದಾ?"

"ಹೌದ್ ಅವನ್ ಜಾಮೀನ್ ನಿತ್ತ್ ಬುಟ್ಟ್, ಅಡ್ವೋಕೇಟ್ ಪ್ರಭಾಕರನ ಕೈಲಿ ಜಾಮೀನ್ ಅರ್ಜಿ ಕೊಡ್ಸಿತ್.

ಬೋರ್‌ಗುಡ್ಡೆ ದೇವಯ್ಯಂಗೆ ಅದನ್ನ ನಂಬಿಕೇ ಆತ್‌ಲೆ ಛೇ ತನ್ನ ಮಂಜ ತನ್ನ ವಿರುದ್ಧ ಕೋವಿ ತೋರ್‍ಸೂದು ಅಂದರೆ......"

ದೇವಯ್ಯ ರೀಸಿವರ್ ಕುಕ್ಕಿತ್. ಕಣ್ಣಿಗೆ ಕಂಡದನ್ನೆಲ್ಲ ಒದ್ದ್ ಮುರಿಯೋಕುತಾ ಅವಂಗೆ ಅನಿಸ್‌ತ್.

ಇಲ್ಲಿಗೆಮುಟ್ಟ........

ಬೋರ್‌ಗುಡ್ಡೆ ದೇವಯ್ಯನ ಮಂಜ್ನ ರಂಜನ್‌ನ ಕೊಲೆ ನಡ್ದ ಸಂಗತಿಲಿ ಫ್ಯಾಕ್ಟ್ ಮಾದಯ್ಯ ಅರೆಸ್ಟ್ ಆಗಿದ್ದದೆ. ಸೋಮಯ್ಯನ ಮಗ್ಳು ನೀಲೂನ ಇತ್ತ ಕಾಡಿಗೆ ಎತ್ತಿಕ್ಕಂಡ್ ಹೋಗಿ ಹತ್ಯಾಚಾರ ಮಾಡಿ ಯಾರಿಗೂ ಗೊತ್ತಾಂಗದ ಹಂಗೆ ಮುಚ್ಚಿಟ್ಟವೆ. ಚಂಗುಮಣಿ ಮತ್ತೆ ಮಾದಯ್ಯ ಇಬ್ಬರು ತಪ್ಪುನ ಒಪ್ಪಿಕಂಡವೆ. ಆದ್ರೆ ಇದೆಲ್ಲಾ ವಿಷ್ಯ ದೇವಯ್ಯನ ಎರಡನೆ ಮಂಜ್ನ ಜೀವನ್‌ಗೆ ಗೊತ್ತಾಗಿ ಅಂವ ಫ್ಯಾಕ್ಟ್ ಮಾದಯ್ಯನ ಬುಡ್ಸುವ ವಿಚಾರದಲಿ ಅಪ್ಪಂಗೂ ಮಂಜ್ನಂಗೂ ಬಾರಿ ವಾದಗ ನಡ್ದವೆ. ನಿರಪರಾಧಿ ಮಾದಯ್ಯನ ಬುಡ್ಸಿಕೆ ಜೀವನ್ ಲಾಯರ್ ಪ್ರಭಾಕರನ ಸಂಪರ್ಕಿಸಿದೆ. ಲಾಯರ್ ಬುದ್ಧಿವಾದ ಹೇಳ್ದೆ ಈ ವಿಚಾರಿಲಿ ಬಾಳ ಎಚ್ಚರಿಕೆ ಬೇಕೂತ. ಆದ್ರೆ ಜೀವನ್ ಇದ್ಯಾವುದು ಕ್ಯಾರೆ ಮಾಡ್ದಲೆ. ಲಾಯರ್ ಪ್ರಭಾಕರ್ ಫ್ಯಾಕ್ಟ್ ಮಾದಯ್ಯನ ಬುಡ್ಸಿಕೆಂತ ಸರ್ಕಲ್ ಇನ್ಸ್‌ಪೆಕ್ಟರ್‌ನ ಕಾಂಬಕೆ ಹೋದೆ

ಮುಂದೆ ನೀವ್ ಓದಕು

ಜೀವನ್ ಹೇಳಿದಂಗೆ ಮಾಡಿ ತೋರಿಸ್‌ತ್. ತನ್ನ ಒಂದು ಎಚ್ಚರಿಕೆಗೆ ಕೂಡ ಅಂವ ಹೆದರಿತ್‌ಲೆ. ನನ್ನ ಮಾತ್‌ಗಿಂತ ಫ್ಯಾಕ್ಟ್ ಮಾದಯ್ಯನ ಮಾತೇ ಅವರಿಗೆ ದೊಡ್ಡದ್ ಆತ್. ರ್‍ಯಾಸ್ಕಲ್ ಇಂತ ಒಬ್ಬ ಮಂಜ ನಂಗೆ ಅಗತ್ಯ ಇಲ್ಲೆ? ಬೇಗ ಅವನ ಮುಗ್ಸಿ ಬುಡೋದೇ ಒಳ್ಳೆದ್ ದೇವಯ್ಯ ರೋಪ್‌ಲಿ ಸಿಡಿ ಮಿಡಿಯಾಗಿತ್.

"ಮುತ್ತಕ್ಕೀ.....?" ಹೆಣ್ಣ್ ಮುತ್ತಕ್ಕಿ ಒಳಗಿಂದ ಬಾತ್.

"ಅಂವ ಎಲ್ಲಿ ಆ ನಾಯಿ ಪೊರ್ಕಿ, ಸೂಳೆ ಮಂಜ?"

"ಯಾರ್‌ನ ಕೇಳ್‌ತಾ ಒಳರಿ?"

"ಅದೇ ನಿನ್ನ ಮುದ್ದಿನ ಕೂಸ್ ಆ ಕಳ್ಳ ರ್‍ಯಾಸ್ಕಲ್ ಎಲ್ಲಿ ಹೋತ್ ಬೇಗ ಹೇಳ್? ಅಂವ ಆ ಫ್ಯಾಕ್ಟ್ ಮಾದಯ್ಯಂಗೆ ಜಾಮೀನ್ ನಿಂತ್ ಅವನ ಬುಡ್ಸಿ ಬಂದದ್ ನಿಂಗೆ ಗೊತ್ತುಟಾ?"

"ಹ್ಞಾಂ ನಿಜನಾ?" ಮುತ್ತಕ್ಕಿ ಆಶ್ಚರ್ಯಂದ ಕೇಳ್‌ತ್.

"ನಂಗೆ ಹುಟ್ಟಿ ನನ್ನ ಅನ್ನ ತಿಂದ್, ನನ್ನ ಹಣಲಿ ಓದಿ ನನ್ನ ವಿರುದ್ಧ ಕತ್ತಿ ಮಸಿಯೋ ಮಂಜ ನಂಗೆ ಅವಶ್ಯಕತೆ ಇಲ್ಲೆ. ಅವನ ಕೊಲ್ಲಿಕೆ ನಾನ್ ತೀರ್ಮಾನ ಮಾಡಿಯೊಳೆ. ನಂಗೆ ಮಕ್ಕಳೇ ಹುಟ್ಟಿತ್‌ಲೇಂತ ನಾನ್ ತಿಳಿದೆನೆ"

ದೇವಯ್ಯ ಬೆಂಕಿ ಚೆಂಡ್‌ನಂಗೆ ಕೆಂಪಾಗಿತ್. ಅಂವ ದಡಬಡಾಂತ ಒಳಗೆ ನಡ್‌ತ್. ನಡ್‌ದ್ ಹೋಕನ ಎದ್‌ರ್‌ಗೆ ಸಿಕ್ಕಿದ ಕುರ್ಚಿ ಟೀಪಾಯಿಗೆಲ್ಲ ಒಂದೊಂದ್ ಒತ್ತ ಕೊಟ್ಟ್ ಮೊಗ್‌ಚಿ ಹಾಕಿತ್.

ಗೌರನೂ, ಮುತ್ತಕ್ಕಿಯೂ ಹೆದ್ರಿ ನಡ್‌ಗ್‌ತಾ ಇದ್ದೊ. ಜೀವನ್ ಫ್ಯಾಕ್ಟ್ ಮಾದಯ್ಯನ ಜಾಮೀನ್‌ಲಿ ಬುಡ್ಸಿದ್ ನಿಜಾಂತ ಆದ್ರೆ ಇದೊಂದ್ ದೊಡ್ಡ ಯುದ್ಧ ಆಗೋದರ್‌ಲಿ ಸಂಶಯ ಇಲ್ಲೆ. ಶತ್ರೂಂತ ಗೊತ್ತಾದ್ರೆ ಸ್ವಂತ ಮಂಜನೇ ಆದ್ರೂ ಕೂಡ ದೇವಯ್ಯ ಕೊಲ್ಲಿಕೆ ಹಿಂದೆ ಮುಂದೆ ನಿಲ್ಲಂವ ಅಲ್ಲಾಂತ ಮುತ್ತಕ್ಕಿಗೆ ಲಾಯ್ಕಾಗಿ ಗೊತ್ತುಟು.

"ಇನ್ನೀಗ ಈ ಮನೆಲೆ ಒಂದ್ ದೊಡ್ಡ ಕಾಳಗ ನಡಿಯಕೆ ಉಟ್ಟವ್ವ. ನನ್ನ ಕುಲದೇವ್ರು ಆ ವೆಂಕಟ್ರಮಣ ಸ್ವಾಮಿ ನೀನೇ ಕಾಪಾಡೋಕು! ನೀನ್ ಹೋಗಿ ಮೀರಂಗೂ ನಿನ್ನ ಅಪ್ಪಂಗೂ ಹೇಳ್, ಜೀವನ್ ಬಂದರೆ ಈ ಕಡೆ ಕಳ್ಸ್ ಬೇಡಿಂತ?" ಮುತ್ತಕ್ಕಿ ಸೊಸೆಗೆ ಹೇಳ್‌ತ್ !

ಸೊಸೆ ಗೌರ ತೌರು ಮನೆಗೆ ಹೋಗಿ ಹ ಬಾತ್.

ಅಂದ್ ಜೀವನ್ ಮನೆಗೆ ಬಾತ್ ಮಾರಣೇ ದಿನ ಬೋರ್‌ಗುಡ್ಡೆಲಿ ಒಂ ಸುದ್ದಿ ಹಬ್ಬಿತ್. ಬೋರ್‌ಗುಡ್ಡೆ ಹಾ ಬಾವಿಲಿ ಒಂದ್ ಗೂಡೆ ಬಿದ್ದ್ ಸತ್ತ್‌ಟೊ ಅದ್ ಕಳ್‌ದ ಮೂರ್ ದಿನದ ಹಿ ಕಾಣೆಯಾದ ನೀಲುನ ಶವಂತ ಯಾರೆ ಕಂಡು ಹಿಡ್‌ದೊಗಡ. ಸುದ್ದಿ ಹೇಳ್‌ದ ಹಾಳ್ ಬಾವಿಯ ಹತ್ರ ಓಡ್‌ದೊ. ಗಾಳಿವ ಸೋಮಯ್ಯನು ಕೂಡ ಓಡ್.

ಶರೀರಯೆಲ್ಲ ಊದಿಬುಟ್ಟ್ ದಪ್ಪ ಆಗಿದ ಅದ್ ತನ್ನ ಮಗಳ ಹೆಣಾಂತ ಸೋಮ ಕಂಡ್ ಹಿಡ್‌ತ್.

ಪೋಲೀಸ್ ಬಂದ್ ಇನ್‌ವೆಸ್ಟಿಗೇ ನಡ್‌ದ ನಂತ್ರ ಶರೀರನ ಮಡಿಕೇರಿ ಸಿವಿ ಆಸ್ಪತ್ರೆಗೆ ತಕಂಡ್ ಹೋದೋ.

(ಮುಂದ್‌ವರ್ದ

---

**ನಿಧನ**

ಕುಯ್ಯಂಗೇರಿ ಗ್ರಾಮದ ಶ್ರೀ ತಡಿಯಪ್ಪ ಬಿದ್ದಪ್ಪನವರ ಪುತ್ರ ಶ್ರೀ ಜನಾರ್ಧನ (ಕುಮಾರ ಇವರು ದಿ. 21-7-99 ರಂದು ನಿಧನರಾದರೆಂ ತಿಳಿದು ಬಂದಿದೆ.

---

**ಸಂಸಾರದ ಇತಿಹಾಸ**

ಪಾಣಿಪಟ್, ಬಕ್ಸಾರ್
ಮೈಸೂರು ಯುದ್ಧಗ
ನಡ್‌ದ್ ತೀರಿ ಹೋತ್
ಆದ್ರೆ,
ಗಂಡ್‌ನ ನೋಟಕ್ಕೆ
ಹೆಣ್ಣ್‌ನ ಮೈಮಾಟಕ್ಕೆ
ನಡಿತಿರ್‌ವ ಈ
ನಿರಂತರ ಯುದ್ಧಲಿ,
ಗಂಡೇ ಸೋಲಿಕೆ ಕಾರಣ ಏನ್?
ಪ್ರೀತಿ ಒಪ್ಪಂದ ಆಗಿ,
ಆಕ್ರಮಿಸಿದ ರಾಜ್ಯಗಳ್‌ಲಿ
ಇಬ್ಬರಿಗೆಸ
ಸಮ ಪಾಲ್ ಆಕನ
ಯಾರ್‌ಸ ಸೋಲುಲೆ
ಯಾರ್‌ಸ ಗೆಲ್ಲುಲೆ

**ಯಾಲದಾಳು ಈ ಚಂದ್ರಕಲಾ,**
**ಮಡಿಕೇರಿ.**

---

**18 ನೇ ಪುಟದಿಂದ**

ಹಬ್ಬಗಳನ್ನು ನಾವೂ ಆಚರಿಸುವಂತಾಗಬೇಕು. ನಮ್ಮ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಪ್ರಚಾರಪಡಿಸುವ ಪುಸ್ತಕಗಳನ್ನು ಪ್ರತಿಯೊಂದು ಹಳ್ಳಿ ಗೌಡ ಸಮಾಜಗಳು ಒಟ್ಟಾಗಿ ಖರೀದಿಸಿ ತಮ್ಮೊಳಗೆ ಎಲ್ಲರಿಗೂ ಹಂಚಬೇಕು. ಮತ್ತು ಅಂತಹ ಪತ್ರಿಕೆ, ಪುಸ್ತಕಗಳ ಅಭಿವೃದ್ಧಿಗಾಗಿ ಸಮಾಜವು ಶ್ರಮಿಸಬೇಕು. ಪ್ರತಿ ವರ್ಷವೂ ಹಳ್ಳಿಗಳ ಜಾತ್ರೆಗಳಲ್ಲಿ ಸಾಂಸ್ಕೃತಿಕ ಜಾತ್ರೆಗಳನ್ನು ಏರ್ಪಡಿಸಬೇಕು. ಸಮಾಜದಲ್ಲಿ ಗಣ್ಯ ಹುದ್ದೆಗೆ ಏರಿದವರು ಸರಕಾರದಿಂದ ಸಿಗುವ ಸವಲತ್ತುಗಳನ್ನು ನಮ್ಮ ಸಂಸ್ಕೃತಿಯ ಏಳಿಗೆಗೆ ದೊರಕಿಸಿ ಕೊಡಬೇಕು. ಮುಖ್ಯವಾಗಿ **ಈಗಿರುವ ಮೇಲು ಕೀಲು ಭಾವನೆ** ಹೋಗಲಾಡಿಸಲು ಪ್ರಯತ್ನಿಸಬೇಕು. ಇದರಿಂದ ಸಮಾಜದಲ್ಲಿ ಐಕ್ಯತೆ ಮೂಡುತ್ತದೆ ಮತ್ತು ಸಂಸ್ಕೃತಿ ಬೆಳೆಯುತ್ತದೆ. ನಮ್ಮ ಸಂಸ್ಕೃತಿಯನ್ನು ಬೆಳೆಸಲು ಇನ್ನೊಂದು ಉತ್ತಮ ಸಾಧನ ಪತ್ರಿಕಾ ಮಾಧ್ಯಮ, ರೇಡಿಯೋ ಹಾಗೂ ಟಿ. ವಿ. ಇದರ ಪೂರ್ಣ ಲಾಭವನ ಪಡೆದು ಕೊಳ್ಳಬೇಕು.

ಕೊನೆಯದಾಗಿ, ಜಪಾನ್ ಈ ಆಧುನಿ ತಂತ್ರಜ್ಞಾನದ ಯುಗದಲ್ಲಿ ಅತ್ಯಂತ ಮುಂದುವರಿ ದೇಶ. ಆದರೂ ಅದು ತನ್ನ ಸಂಸ್ಕೃತಿಯನ್ನು ಬೇರೆ ಎಲ್ಲಾ ದೇಶಗಳಿಗಿಂತ ಚೆನ್ನಾಗಿ ಉಳಿಸಿ ಬೆಳೆಸಿಕೊಂಡು ಬರುತ್ತಿದೆ. ಆಧುನಿಕತೆ ಸಂಸ್ಕೃತಿಯ ಉಳಿವಿಗೆ ಮಾರಕವಾಗುವುದಿಲ್ಲವೆಂದು ಅವರು ತೋರಿಸಿ ಕೊಟ್ಟಿದ್ದಾರೆ. ಈಗಿರುವ ನಮ್ಮ ಪತ್ರಿಕಾ ಮಾಧ್ಯಮವನ್ನು ಪೂರ್ಣ ಪ್ರಮಾಣದಲ್ಲಿ ಬಳಸುವಂತಾಗಬೇಕು. ಈ ನಿಟ್ಟಿನಲ್ಲಿ ನಾವು ಮುಂದೆ ಸಾಕಷ್ಟು ದೂರ ಶ್ರಮಿಸಬೇಕಾಗಿದೆ.

**ಉಳುವಾರನ ಸುರೇಶ್ ಕುಮಾರ್,**
**ಚೈನ್ನೈ.**

**21ನೇ ಶತಮಾನದತ್ತ ಪುಟ್ಟದಾಗಿ ದಿಟ್ಟ ಹೆಜ್ಜೆಯನ್ನಿಡುತ್ತ ತನ್ನ 3ನೇ ವರ್ಷದಲ್ಲಿ ಮುನ್ನೆಡೆಯುತ್ತಿರುವ, ನೆಚ್ಚಿನ ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆಗೆ ನಮ್ಮ ಹಾರ್ದಿಕ ಶುಭ ಹಾರೈಕೆಗಳು**







**ಹರೀಶ್, ವೀಣಾ, ಆಶ್ವಿನ್ ಹಾಗೂ ಐಶ್ವರ್ಯ ದಂಬೆಕೋಡಿ**

ನಿಮ್ಮ ಸಂಗಾತಿ ಪತ್ರಿಕೆ ತಪ್ಪದೆ ನಂಗೆ ಸಮಯಕ್ಕೆ ಸರಿಯಾಗಿ ಬರ್ತಾ ಉಟ್ಟು. ಊರ್ ಕಡೆ ವಿಷ್ಯ ಓದಿ ನಾವುಗ ಸಂತೋಷ ಪಡ್ತಾ ಒಳೋ. ಹಿಂಗೆ ಮುಂದ್‌ವರ್ಸಿ. ಕರೆ, ಮೊರೆ, ವಿಷಾದ, ಸಹಕಾರ ಓದಿ ನನ್ನಿಂದಾಗುವ ಸಹಕಾರ ಮಾಡ್ತ ಒಳೆ ದಯ್ಯವಿಟ್ಟು ಸ್ವೀಕರಿಸಿ.

ನಮ್ಮ ಕುಲದೇವ್ರು ವೆಂಕಟರಮಣನ ಆಶೀರ್ವಾದ ಸದಾ ಇರಲಿತ್ತೇಳಿ ಹಾರೈಸುವೆ.


Home :
**Harish & Veena Dambekodi**
San Antonio
10010 Broadway 802
San Antonio, TX 78217-4414,
U.S.A. PH : (210) 824-7405
E-MAIL : Vadambekodi@aol.com.

Office :
M & Q PLASTIC PRODUCTS, LP
**Harish S. Dambekodi**
Shipping & Receiving Manager
4323, Interstate Way,
San antonio, Texas 78219
Tel : (210) 225-7622
Fax : (210) 225-7303, U.S.A.

K. R. N. N. - 240 10-01-96 TCI Kar. 09592

# ಶುಭ ಹಾರೈಕೆ



ಶ್ರೀ ಚೆರಿಯಮನೆ ಲೋಕೇಶ್ ಮತ್ತು ಲೀಲಾವತಿ

ಶ್ರೀ ಲೋಕೇಶ್‌ರವರು ಚೆರಿಯಮನೆ ಲೇಟ್ ಕ್ಯಾಪ್ಟನ್ ಶಿವರಾಮು ಮತ್ತು ಶ್ರೀಮತಿ ಪ್ರೇಮ ಶಿವರಾಮುರವರ ಪುತ್ರರೂ ಹಾಗೂ ಬೈತಡ್ಕ ಜೋಯಪ್ಪ ಮತ್ತು ಡಾ. ಬೋಜಮ್ಮರವರ ಅಳಿಯಂದಿರಾಗಿರುತ್ತಾರೆ. ಇವರು ಪ್ರತಿಭಾವಂತ ಎಲೆಕ್ಟ್ರಾನಿಕ್ ಇಂಜಿನಿಯರ್ ಆಗಿದ್ದು, ಈತನಕ ಬೆಂಗಳೂರಿನಲ್ಲಿರುವ ಬಹುದೇಶಗಳ ಕಂಪನಿಯೊಂದರಲ್ಲಿ ಉದ್ಯೋಗದಲ್ಲಿದ್ದು, ಅವರ ಅಪಾರ ಅನುಭವಕ್ಕಾಗಿ ಕ್ಯಾಲಿಫೋರ್ನಿಯಾ (USA) ದಲ್ಲಿಯ ಕಂಪನಿಯೊಂದರಲ್ಲಿ ಉದ್ಯೋಗ ದೊರೆತಿದ್ದು, ತಮ್ಮ ಹೊಸ ಉದ್ಯೋಗಕ್ಕೆ ಸೇರ್ಪಡೆಯಾಗಲು ಮತ್ತು ಹೆಚ್ಚಿನ ವ್ಯಾಸಂಗಕ್ಕಾಗಿ ದಿನಾಂಕ 25-7-99ರಂದು ಕ್ಯಾಲಿಫೋರ್ನಿಯಾಕ್ಕೆ ಸಿಂಗಾಪುರ, ಹಾಂಕಾಂಗ್ ವಾಯು ಮಾರ್ಗವಾಗಿ ಪ್ರಯಾಣಿಸಿರುವರು. ಇವರ ಪತ್ನಿ ಶ್ರೀಮತಿ ಬಿ. ಜೆ. ಲೀಲಾವತಿಯವರು ಟೆಲಿಕಾಂ ಇಂಜಿನಿಯರ್ ಆಗಿದ್ದು, ಮುಂದಿನ 4-5 ತಿಂಗಳುಗಳಲ್ಲಿ ತನ್ನ ಪತಿಯನ್ನು ಸೇರಲು ಹಾಗೂ ಹೊಸ ಉದ್ಯೋಗ ಮತ್ತು ಹೆಚ್ಚಿನ ವ್ಯಾಸಂಗಕ್ಕಾಗಿ ವಿದೇಶ ಪ್ರಯಾಣ ಬೆಳೆಸಲಿದ್ದಾರೆ. ಲೋಕೇಶ್‌ರವರು ಅಮೇರಿಕಾದಲ್ಲಿದ್ದಾಗ ತಮ್ಮ ಕರ್ತವ್ಯದ ನಿಮಿತ್ತ ಥೈವಾನ್, ಕೊರಿಯಾ ಮತ್ತು ಜಪಾನ್‌ದೇಶಗಳಿಗೂ ಭೇಟಿ ಮಾಡಿ ವ್ಯವಹರಿಸಲಿದ್ದಾರೆ. ಈ ದಂಪತಿಗಳಿಗೆ ಕುಲದೇವರಾದ ಶ್ರೀ ವೆಂಕಟರಮಣಸ್ವಾಮಿ ದಯೆ ಕೃಪಾ ಕಟಾಕ್ಷ ಸದಾ ಇರಲೆಂದು ಶುಭ ಹಾರೈಸುವೆವು. ವಿದೇಶ ಪ್ರಯಾಣಕ್ಕಾಗಿ ಶ್ರೀ ಲೋಕೇಶ್‌ರವರಿಗೆ ಶುಭಾಶಯಗಳನ್ನು ಕೋರುವ

ತಾಯಿ : **ಚೆರಿಯಮನೆ ಶ್ರೀಮತಿ ಪ್ರೇಮ ಶಿವರಾಮು,** ಬೆಂಗಳೂರು

ಪತ್ನಿ : **ಚೆರಿಯಮನೆ ಶ್ರೀಮತಿ ಬಿ. ಜೆ. ಲೀಲಾವತಿ** ಬಿ.ಇ.

ಅಕ್ಕ/ಭಾವ : **ಡಾ. ಅನುಸೂಯ,** ಎಂ.ಬಿ.ಬಿ.ಎಸ್., ಡಿ.ಜಿ.ಓ., **ಡಾ. ಭವನ್ ಶಂಕರ್,** ಎಂ.ಬಿ.ಬಿ.ಎಸ್., ಎಂ.ಎಸ್., ತಿರುಚಿ , ಕೇರಳ

ತಂಗಿ/ಮೈದುನ : **ಶ್ರೀಮತಿ ಮಧು, ಶ್ರೀ ಚಂದ್ರಶೇಖರ,** ಬೆಂಗಳೂರು

ಮಾವ/ಅತ್ತೆ : **ಬೈತಡ್ಕ ಎ. ಜೋಯಪ್ಪ,** ಡಿ.ವೈ.ಎಸ್ಪಿ., ಕರ್ನಾಟಕ ಲೋಕಾಯುಕ್ತ, ಬೆಂಗಳೂರು

**ಡಾ. ಎಂ. ಎನ್. ಬೋಜಮ್ಮ,** ಎಂ.ಬಿ.ಬಿ.ಎಸ್., ಎಂ.ಡಿ. ಡಿ.ಎನ್.ಟಿ., ಫಿಜಿಷಿಯನ್ ಮತ್ತು ಹೃದ್ರೋಗ ತಜ್ಞರು, ಬೆಂಗಳೂರು

ನಾದಿನಿ/ಮೈದುನ : **ಕು. ಬಿ. ಜೆ. ಲಕ್ಷ್ಮಿ** (ಎಂ.ಬಿ.ಬಿ.ಎಸ್.) **ಕು. ಲೋಹಿತ್. ಬಿ. ಜೆ.** ಹಾಗೂ ಅಪಾರ ಬಂಧು ಮಿತ್ರರು

---

*The Gala Opening Ceremony of*

## WESTERN COORG WOODS CRAFTS

*On presious Independence Day 15th August 1999 at No. 1029, Bettegowda Complex, Vijayanagar Main Road, Near Abishek Circle, M. G. Koppal, Mysore - 570- 017*

### HONOURABLE GUESTS OF THE DAY

**Shri VIJAY SHANKAR,** Member of Parliament
**Shri VASU,** Ex. Mayor
**Shri CHALVE GOWDA,** Corporator
**Shri NEYYANI KUSHALAPPA**

**Shri SRINIVASA PRASAD,** Ex. member of Parliament
**Shri L. RACHIAH,** Commandent (KSRP)
**Shri MATHANDA MONNAPPA,** President Akila Kodava Samaja

**Muhurtham : 11-00 a.m.**

*Yours,*
**Partners**
**WESTERN COORG WOOD CRAFTS**

***Best Compliments From :***
Mr. Pallipura S. Bharath, Mr. Patelaramane R. Vasantha, Mr. Kudukuli S. Lokesh

---

**Kodagu Sangathi** Kannada Fortnightly Edited, Published, Printed & Owned by Pattada P. Sheelamani, No. 35, Savitha Nilaya, I Cross, 4th Block, **Jayalaxmipuram, Mysore - 12.** And **SANGATHI** Office ✆ : **0821/516771.** And Printed at Sri Guru Raghavendra Printers, 489, Devamba Agrahara, K. R. Mohalla, Mysore - 24. ✆ : 0821/431792.